ಕಾಯಕವೇ ಕೈಲಾಸ

# ಸಿದ್ಧಗಂಗಾ

ಸಂಪುಟ : ೫೨ ಜುಲೈ ೨೦೧೬ ಸಂಚಿಕೆ : ೦೭




ಕೇಂದ್ರ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವೆ ಶ್ರೀಮತಿ ಮನೇಕಾ ಗಾಂಧಿ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯರ ದಿವ್ಯಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಬಿಜೆಪಿ ರಾಷ್ಟ್ರೀಯ ಉಪಾಧ್ಯಕ್ಷರಾದ ಶ್ರೀ ಶ್ಯಾಮ್ ಭೌಜು, ಶಾಸಕರಾದ ಶ್ರೀ ಸುರೇಶಗೌಡ, ಮಾಜಿ ಸಂಸದರಾದ ಶ್ರೀ ಜಿ.ಎಸ್. ಬಸವರಾಜ್, ತುಮಕೂರು ಜಿಲ್ಲಾ ಬಿಜೆಪಿ ಅಧ್ಯಕ್ಷರಾದ ಶ್ರೀ ಜಿ.ಬಿ. ಜ್ಯೋತಿಗಣೇಶ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ವಿಧಾನ ಪರಿಷತ್ತಿನ ಸದಸ್ಯರಾಗಿ ಮರು ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿಯವರು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉಪಸ್ಥಿತರಿದ್ದರು.



ತೇನ್‌ಸಿಂಗ್ ಮಾರ್ಗದರ್ಶನದೊಂದಿಗೆ ಹಿಮಾಲಯ ಪರ್ವತಾರೋಹಣ ಮಾಡಿದ ರಾಜ್ಯ ಮತ್ತು ರಾಷ್ಟ್ರೀಯ ಪ್ರಶಸ್ತಿ ಪುರಸ್ಕೃತರಾದ ಶ್ರೀ ಎಂ. ನಾಗೇಂದ್ರಪ್ಪ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು.





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೫೨ ಜುಲೈ ೨೦೧೬ ಸಂಚಿಕೆ : ೦೭


## ಒಳಪುಟಗಳಲ್ಲಿ ..................




ಸಂಪಾದಕರು :
**ಹೆಚ್.ವಿ. ವೀರಭದ್ರಯ್ಯ**
ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**
ಸಹಾಯಕ ಸಂಪಾದಕರು :
**ಕೆ.ಬಿ. ಶಿವಶಂಕರಯ್ಯ**
ಸಂಚಾಲಕರು :
**ಎಂ. ರೇಣುಕಾರಾಧ್ಯ**
ವಿತರಕರು :
**ಆರ್.ಎಸ್. ಮಲ್ಲೇಶಪ್ಪ**
ಪ್ರಕಾಶಕರು :
**ಹೆಚ್.ಬಿ. ಗಂಗಾಧರಯ್ಯ**
**ಜಿ.ಆರ್. ಶಂಕರಪ್ಪ**
ಛಾಯಾಚಿತ್ರ ಸಂಗ್ರಾಹಕರು :
**ಸಿ. ಕುಮಾರಸ್ವಾಮಿ**
ಪ್ರಕಾಶನ :
**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –572 104.
ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು–572 104.
ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ'** ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ–572 104
ದೂ: 0816–2282322.

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 12.00

# ಅಭಿನಂದನೆ

**ತ**ಮ್ಮ ಹಾಗೂ ಪುತ್ರಿಯ ಬಂಗಾರದ ಆಭರಣಗಳನ್ನು ಮಾರಾಟ ಮಾಡಿದ್ದರಿಂದ ದೊರೆತ ತೊಂಭತ್ತಾರು ಸಾವಿರ ರೂ.ಗಳನ್ನು ಗ್ರಾಮದ ಜನರಿಗೆ ಶೌಚಾಲಯ ನಿರ್ಮಿಸಿ ಕೊಡಲು ವಿನಿಯೋಗಿಸಿದ ಕಲಬುರ್ಗಿ ಜಿಲ್ಲೆ ಜೇವರ್ಗಿ ತಾಲ್ಲೂಕು ಹರವಾಳ ಗ್ರಾಮದ ಕೂಲಿ ಕಾರ್ಮಿಕ ಮಹಿಳೆ ಶ್ರೀಮತಿ ಅಕ್ಕಮ್ಮ ಹರವಾಳ ಎಲ್ಲರಿಗೂ ಮಾದರಿಯಾಗಿದ್ದಾರೆ. (ಪ್ರಜಾವಾಣಿ ೧೪-೬-೨೦೧೬) ಘನಮನ ಸಂಪನ್ನರಾದ ಅಕ್ಕಮ್ಮ ಹರವಾಳರವರಿಗೆ **'ಸಿದ್ಧಗಂಗಾ'** ಅಭಿನಂದನೆಯನ್ನು ಸಲ್ಲಿಸಲು ಸಂತೋಷಿಸುತ್ತದೆ.

ಜುಲೈ ೨ರ ಶನಿವಾರ ಶರಣ ಫ.ಗು. ಹಳಕಟ್ಟಿಯವರ ಸ್ಮರಣೋತ್ಸವದ ಶುಭದಿನ. '೨೦ನೇ ಶತಮಾನದ ಪೂರ್ವಾರ್ಧದಲ್ಲಿ ವೀರಶೈವ ವಾಙ್ಮಯವನ್ನು ಉದ್ಧರಿಸಿದ ಮಹಾಪುರುಷರಲ್ಲಿ ಫ.ಗು. ಹಳಕಟ್ಟಿಯವರು ಅಗ್ರಗಣ್ಯರು. ವೃತ್ತಿಯಲ್ಲಿ ವಕೀಲರು. ವೀರಶೈವ ಧರ್ಮ-ಸಾಹಿತ್ಯ-ಸಂಸ್ಕೃತಿಗಳನ್ನು ಪ್ರಸಾರ ಮಾಡುವ ಸಲುವಾಗಿ ೧೯೨೬ರಲ್ಲಿ **'ಶಿವಾನುಭವ'** ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ದೊರೆತ ಹಸ್ತಪ್ರತಿಗಳನ್ನು ಪರಿಷ್ಕರಿಸಿ ವಚನ ಸಂಕಲನಗಳನ್ನು ಪ್ರಕಟಿಸಿದರು. ೧೯೨೬ರಲ್ಲಿ ಗಣದಾಸಿ ವೀರಣ್ಣನವರ ವಚನಗಳ, ೧೯೨೬ರಲ್ಲಿ ಸಂಗನ ಬಸವೇಶ್ವರನ ವಚನಗಳು, ೧೯೨೮ರಲ್ಲಿ ದೇವರ ದಾಸಿಮಯ್ಯನ ವಚನಗಳು, ೧೯೩೧ರಲ್ಲಿ ಪ್ರಭುದೇವರ ವಚನಗಳು, ಆದಯ್ಯನ ವಚನಗಳು, ೧೯೩೭ರಲ್ಲಿ ಸಿದ್ಧರಾಮೇಶ್ವರನ ವಚನಗಳು, ಚನ್ನಬಸವೇಶ್ವರನ ವಚನಗಳು, ೧೯೩೪ರಲ್ಲಿ ಅಂಬಿಗರ ಚೌಡಯ್ಯನ ವಚನಗಳು, ೧೯೩೬ರಲ್ಲಿ ಉರಿಲಿಂಗಪೆದ್ದಿಯ ವಚನಗಳು, ಭಂಡಾರಿ ಶಾಂತಯ್ಯ ನವರ ವಚನಗಳು, ರೆಮ್ಮವ್ವೆಯ ವಚನಗಳು, ಏಲೇಶ ಕೇತಯ್ಯನ ವಚನಗಳು, ಸೊಡ್ಡಳ ಬಾಚರಸನ ವಚನಗಳು, ಅರುವಿನ ಮಾರಿತಂದೆಯ ವಚನಗಳು, ಮೈಲಾರ ಬಸಪ್ಪ, ಸೋಮೆಕಟ್ಟೆ ಕರಿವೃಷಭೇಂದ್ರರ ಪದಗಳು ಶಿವಾನುಭವದಲ್ಲಿ ಪ್ರಕಟವಾದವು. ಕರ್ನಾಟಕದ ಪ್ಲೇಟೋ ಎಂದು ಹೆಸರಾದ ಗೂಳೂರು ಸಿದ್ಧವೀರಣಾರ್ಯನ **'ವೀರಶೈವ ಧರ್ಮ ಮಂದಿರಕ್ಕೆ ಒಂದು ಪ್ರಕಾಶಮಾನವಾದ ಕಲಶ'**ವೆನಿಸಿದ ಶೂನ್ಯ ಸಂಪಾದನೆ ಕೃತಿಗಳನ್ನು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿದರು. ಹರಿಹರ ಕವಿಯ ರಗಳೆಗಳನ್ನು 'ಶಿವಾನುಭವ' ದಲ್ಲಿ ಬೆಳಕಿಗೆ ತಂದರು. ಹರಿಹರನ ರಗಳೆಗಳನ್ನು ಹಳಕಟ್ಟಿಯವರು ಪ್ರಕಟಿಸಿರದಿದ್ದರೆ ಕವಿಯ ಬಗೆಗಿನ ನಮ್ಮ ಅಜ್ಞಾನ ವಿಶೇಷವಾಗಿರುತ್ತಿತ್ತು.

ಹಳಕಟ್ಟಿಯವರು ಏಕಾಂತ ವೀರರು. ಅವರ ಕಾರ್ಯವ್ಯಾಪ್ತಿಯನ್ನು ಕಂಡಾಗ ಅಚ್ಚರಿಯಾಗುತ್ತದೆ. ಒಬ್ಬನೇ ವ್ಯಕ್ತಿ ಇಷ್ಟೆಲ್ಲಾ ಕೆಲಸ ಮಾಡಲು ಸಾಧ್ಯವೇ ? ಎಂದು ಪ್ರಶ್ನೆ ಮೂಡುವುದು ಸಹಜ. ಒಂದು ಸರಕಾರಿ ಸಂಸ್ಥೆ, ಒಂದು ವಿಶ್ವವಿದ್ಯಾಲಯ, ಸಾಹಿತ್ಯ ಪರಿಷತ್ತಿನಂತಹ ಒಂದು ಸಾಹಿತ್ಯಿಕ ಸಂಸ್ಥೆ ಮಾಡಬಹುದಾದ ಕೆಲಸವನ್ನು ಸದ್ದುಗದ್ದಲವಿಲ್ಲದೆಯೇ, ಪದವಿ ಪ್ರತಿಷ್ಠೆಗಳಿಗೆ ಆಸೆ ಪಡದೆ, ಧನಬಲವಿಲ್ಲದೆಯೇ ಹಳಕಟ್ಟಿಯವರು ಸುಮಾರು ನಾಲ್ಕು ದಶಕಗಳವರೆಗೆ ಒಬ್ಬರೇ ಮಾಡಿದರು. ಅವರೊಬ್ಬ ವ್ಯಕ್ತಿಯಲ್ಲ, ಶಕ್ತಿ. ಅಂತಹ ಪುಣ್ಯಶಕ್ತಿಯ ನೆನಪು ನಾಡಿನ ಯುವಚೈತನ್ಯಕ್ಕೆ ಸ್ಫೂರ್ತಿಯ ಸಂಕೇತ.

(ಕೃಪೆ: ಸಿರಿಸಂಪದ : ಡಾ. ಬಿ.ವ್ಹಿ. ಶಿರೂರು ಅಭಿನಂದನಾ ಗ್ರಂಥ, ಡಾ.ಎಸ್. ವಿದ್ಯಾಶಂಕರ ಅವರ ಫ.ಗು. ಹಳಕಟ್ಟಿ ಲೇಖನ)



**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು





# ಶಿಕ್ಷಕ



ಶಿಕ್ಷಕ ಸಮಾಜದ ರೂವಾರಿ. ವಿದ್ಯಾರ್ಥಿಗಳ ಹೃತ್ಕೋಶದಲ್ಲಿ ಹುದುಗಿರುವ ಶಕ್ತಿ ವಿಶೇಶವನ್ನು ಹೊರತರುವ, ವಿಕಾಸ, ವಿಸ್ತಾರ ವೈವಿಧ್ಯಕ್ಕೊಳಪಡಿಸುವ, ವ್ಯಕ್ತಿತ್ವ ನಿರ್ಮಾಣ ಮಾಡುವ, ತನ್ಮೂಲಕ ಸಮಾಜವನ್ನು ಶಿವಮುಖವಾಗಿ ಮುನ್ನಡೆಸುವ ಸುಶೀಲನಾದ ಶಿಕ್ಷಕ ಸಾರ್ವಕಾಲಿಕ, ಸರ್ವತ್ರ ಆದರಣೀಯನಾದವನು. ತನ್ನ ಬಳಿಗೆ ಬಂದ ಜ್ಞಾನಪಿಪಾಸುವನ್ನು ಬೆಳೆಸುತ್ತ ತಾನೂ ಬೆಳೆಯುತ್ತ ಮಾನವ ಕಲ್ಯಾಣದಲ್ಲಿ ನಿರತನಾಗುವ ಭಾಗ್ಯ ಶಿಕ್ಷಕನದು. ಜನ್ಮಕೊಟ್ಟ ತಾಯಿ ತಂದೆಯರಿಗಿಂತ ಜ್ಞಾನನೀಡುವ ಶಿಕ್ಷಕ ಸ್ಮರಣೀಯನಾಗುತ್ತಾನೆ. ಭಾರತೀಯ ಸಂಸ್ಕೃತಿಯಲ್ಲಿ ಶಿಕ್ಷಕನಿಗೆ ಮಹತ್ವದ ಸ್ಥಾನ-ಮಾನ.



ಜೀವನವೆಲ್ಲ ಶಿಕ್ಷಣವೇ ಜೀವನದ ಪ್ರತಿಯೊಂದು ಅವಸ್ಥೆಯೂ ಘಟನೆಯೂ ಅನುಭವವೂ ಶಿಕ್ಷಣವೇ ಎಂಬುದನ್ನು ಶಿಕ್ಷಣ ತಜ್ಞರು ಒಪ್ಪುತ್ತಾರೆ. ಶಾಲಾ ಕಾಲೇಜುಗಳು ಕೇವಲ ಅಕ್ಷರಸ್ಥರನ್ನು, ವಿಷಯ ಸಂಗ್ರಾಹಕರನ್ನು, ಮಾಹಿತಿ ಮೋಹಿತರನ್ನು, ನಿರ್ಮಾಣ ಮಾಡುವ ಕಾರ್ಯಾಗಾರಗಳಾಗಬಾರದು. ಜೀವನ ಪ್ರೀತಿಯನ್ನು, ಮಾನವೀಯತೆಯನ್ನು, ಪರಹಿತಾರ್ಥಪರ ಮನುಷ್ಯರನ್ನು ಸೃಷ್ಟಿಸುವ ಕಮ್ಮಟಗಳಾಗಬೇಕು. ಕೇವಲ ಓದುಗರನ್ನಲ್ಲ, ಉತ್ತಮ ಲೇಖಕರನ್ನು, ಚಿಂತನ ಶೀಲರನ್ನು, ಸ್ಪಂದನ ಗುಣರತ್ನರನ್ನು, ಸಮಾಜಕ್ಕೆ ಅರ್ಪಿಸುವ ಕೇಂದ್ರಗಳಾಗಬೇಕು. ಶಿಕ್ಷಕ ಕಾಯಕಪ್ರೇಮಿಯಾಗಿ, ದಾಸೋಹಂಭಾವದಿಂದ ಬಳಿಗೆ ಬಂದ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುವ ಮನೋಭಾವಿಯಾಗಬೇಕು.

ಶಿಕ್ಷಕನನ್ನು ಲೋಕಾ ಸದಾ ನೋಡುತ್ತಿರುತ್ತದೆ. ಅದರಲ್ಲೂ ವಿದ್ಯಾರ್ಥಿ ಲೋಕಾ ನಿರಂತರ ಕಣ್ಣಿಟ್ಟಿರುತ್ತದೆ. ಅವನ ನುಡಿ-ನಡೆಗಳನ್ನು, ಚಲನವಲಗಳನ್ನು, ಶೀಲ-ವ್ಯಸನಗಳನ್ನು ಗಮನಿಸುತ್ತಿರುತ್ತದೆ. ಶಿಕ್ಷಕನ ಪಾಂಡಿತ್ಯ ಪ್ರತಿಭೆಗಳಿಗಿಂತ ಅವನ ಬದುಕನ್ನು ತೆರದ ಕಣ್ಣುಗಳಿಂದ ನೋಡುತ್ತದೆ. ಶಿಕ್ಷಕನ ನಿಜವಾದ ವಿಮರ್ಶಕರು ವಿದ್ಯಾರ್ಥಿಗಳು. ಶಿಕ್ಷಕ ವಿದ್ಯಾರ್ಥಿಯ ಜೀವನದಲ್ಲಿ ಅದ್ಭುತ ಕ್ರಾಂತಿ ಮಾಡಬಲ್ಲ ಮಹಾಶಕ್ತಿ. ಮೃಗವನ್ನು ಮಾನವನನ್ನಾಗಿ ಪರಿವರ್ತಿಸುವ ಮಾಂತ್ರಿಕ.

ಇಂದಿನ ಶಿಕ್ಷಕರಿಗೆ ಕುಲ, ಅಧಿಕಾರ, ಐಶ್ವರ್ಯ, ಪಾಂಡಿತ್ಯ ಮುಖ್ಯವಲ್ಲ. ಶೀಲಸಂಪತ್ತೊಂದೇ ಶಿಕ್ಷಕನ ನಿಜವಾದ ಸಂಪತ್ತು. ಜನಾಂಗ ನಿರ್ಮಾಣ ಮಾಡುವ ಶಿಕ್ಷಕನೇ ಶೀಲಚ್ಯುತನಾದರೆ ಹೇಳುವುದಿನ್ನೇನು ? ವಿದ್ಯಾರ್ಥಿಗಳು ಸುಧಾರಿಸಬೇಕಾದರೆ ಶಿಕ್ಷಕರು ಸುಧಾರಿಸಬೇಕು. ಶಿಕ್ಷಕರು ಸುಧಾರಿಸಿದರೆಂದರೆ ರಾಷ್ಟ್ರ ಸುಧಾರಿಸಿತೆಂದೇ ಭಾವನೆ.

*

## ಶ್ರೀ ಸಿದ್ಧಲಿಂಗೇಶ್ವರ ವಚನ



***ಶಶಿಮುಖಿಯರ ಸಂಗಕ್ಕೆಣಿಸುವ ಪಶುಪ್ರಾಣಿಗಳು***
***ಪಶುಪತಿಯ ಸಂಗ ಸುಖಿಕ್ಕೊಣಿಸಲೊಲ್ಲರಯ್ಯಾ?***
***ಶಿವಶಿವಾ ನೀ ಮಾಡಿದ ವಿಷಯದ ವಿಧಿ***
***ಈರೇಳು ಲೋಕವನಂಡಲೆಯುತ್ತಿದೆ ನೋಡಾ***
***ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ***

ಶಶಿಮುಖಿಯರ –ಪೌರ್ಣಿಮಿ ಚಂದ್ರನೋಪಾದಿಯಲ್ಲಿ ವದನವನ್ನುಳ್ಳ ಸ್ತ್ರೀಯರುಗಳ, ಸಂಗಕ್ಕೆ –ಸಂಪರ್ಕಕ್ಕೆ, ಎಣಿಸುವ –ಇಚ್ಛಿಸುವ, ಪಶು ಪ್ರಾಣಿಗಳು – ಜೀವಪ್ರಾಣಿಗಳು, ಪಶುಪತಿಯ ಬ್ರಹ್ಮಾದಿ ಪಶುಗಳಿಸಿ ಕರ್ತೃವಾದ ಪರಶಿವಲಿಂಗದ ಇಷ್ಟಲಿಂಗವಾಗಿ ಅಂಗದಲ್ಲಿ ಸಂಬಂಧವ ಮಾಡಿಕೊಂಡು ಅಷ್ಟ ವಿಧಾರ್ಚನೆ ಷೋಡಶೋಪಚಾರ ಕ್ರಿಯೆಗಳಿಂದ ಆರಾಧಿಸಬೇಕೆಂಬ ಪರಿಣಾಮಕ್ಕೆ, ಎಣಿಸಲೊಲ್ಲರಯ್ಯಾ – ಇಚ್ಛೈಸ ಲೊಲ್ಲರಯ್ಯಾ, ಶಿವಂ ಎಲೇ ಪರಮೇಶ್ವರನೆ, ನೀ ಮಾಡಿದ – ನೀ ಉಂಟು ಮಾಡಿದ, ವಿಷಯ – ವಿಷಯ ಪ್ರಪಂಚೆಂಬ, ವಿಧಿ – ಪ್ರಾಪ್ತಿಯು, ಈರೇಳು ಲೋಕವನು ಹದಿನಾಲ್ಕು ಲೋಕಂಗಳನು, ಅಂಡಲೆವುತ್ತಿದೆ – ಪೀಡಿಸುತ್ತಿದೆ ನೋಡಾ ಕಂಡಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಾಯ ಜೀವಮನವು ಪರಮನ ಕೂಡುವ
ತೆರನ ಬೋಧಿಪ ವರಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಯೋಗಿ ಭೋಗಿಗಳಿರಲಿ ಕಳ್ಳಸುಳ್ಳರಿರಲಿ
ಸಮಭಾವ ಮೃದು ಮಾತನಾಡುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಮವ ಕಳೆಯಿಂದೆ ಕ್ರೋಧದ ಬಿಡು ಎಂದೆ
ಲೋಭ ಮೋಹಗಳ ದಾಟೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆರನು ಕಳೆಯೆಂದೆ ಆರನು ಹಿಡಿಯೆಂದೆ
ಆರು ಸ್ಥಲಗಳಲಿ ಚರಿಸೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಶಿಯಾತ್ರೆಯು ಬೇಡ ಸೇತುಬಂಧವು ಬೇಡ
ಗುರುಪಿತ್ತ ಅರುಹಿನ ಕುರುಹು ಅರಿಯೆಂದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯವೆ ಶ್ರೀಕಾಶಿ ಒಡಲೇ ಕೇದಾರವು
ಮಾಡಿ ನೀಡುವ ಮನವೆ ಶ್ರೀಗಿರಿ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗದೊಳಗೆ ನೀನಿರು ನಿನ್ನೊಳಗೆ ಜಗವಿರಲಿ
ಜಗವು ನೀನು ಅಗಲಿದಂತಿರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಜ್ಯೋತಿಯ ನೆನೆದರೆ ಕತ್ತಲೆ ಹರಿವುದು'
ಹಿರಿಯರ ಬರಿದೆ ನೆನೆದರೆ । ಹಿರಿಯರಾಗುವರೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಂಡಹೆಂಡಿರ ಮನವು ಒಂದಾಗಿ ತಾನಿರೆ
ನಂದಾದೀವಿಗೆಯು ಉರಿದಂತೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತನ ಕಾಯಕವೆ ಕೈಲಾಸವೆಂಬುದ
ಸಾವಿರದ ಸೊಲ್ಲಲಿ ಅರುಹಿದ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ದೃತಿಚಿಂತನೆ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

**ವ**ಸ್ತುವಿಗೆ ಹಲವು ಮುಖಗಳು. ಯಾರೇ ಅದರತ್ತ ನೋಡಲಿ, ಅದರ ಎಲ್ಲ ಮುಖಗಳೂ ಕಾಣವು. ಒಂದು ದೃಷ್ಟಿಗೆ ಒಂದು ಮುಖ ಮಾತ್ರ ಕಂಡೀತು. ಒಮ್ಮೊಮ್ಮೆ ವಿಪರ್ಯಾಸ ವಾಗಿಯೂ ಕಾಣಬಹುದು. ಮನುಷ್ಯ ಕುತೂಹಲಿ. ವಸ್ತುವಿನ ಸಮಗ್ರ ನೋಟ ಬಯಸಿದ ಮೊದಲ ಮನುಷ್ಯ ಅದನ್ನು ಮೊದಲು ಅತಿ ಸಮೀಪದಿಂದ ಈಕ್ಷಿಸುವ ಪ್ರಯತ್ನ ಮಾಡಿದ; ನಂತರ ವಿವಿಧ ದೃಷ್ಟಿಕೋನದಿಂದ ನೋಡಿದ; ಬಳಿಕ ಅದರ ಅಂತರಂಗಕ್ಕೆ ಇಳಿಯುವ ಪ್ರಯಾಸ ಮಾಡಿದ. ಅವನಿಗೆ ಗೋಚರಿಸಿದ್ದು ಹೀಗೆ – ಪ್ರತಿ ವಸ್ತುವಿಗೂ ಮೂರು ಮೈ: ಒಂದು ಮೈ ಕಾಲದಲ್ಲಿ ಚಾಚಿದೆ; ಒಂದು ದೇಶದಲ್ಲಿ ಚಾಚಿದೆ; ಇನ್ನೊಂದು ಭಾವದಲ್ಲಿ! ಹೀಗೆ ಬಹುಮುಖಿಯಾದ ವಸ್ತುಗಳ ಮಹಾ ಸಂಚಯಕ್ಕೆ ಆ ಮೊದಲಿಗ ಋಷಿ 'ವಿಶ್ವ' ಎಂದು ಕರೆದ. ಅದು ಅತ್ಯಂತ ಅನ್ವರ್ಥಕನಾಮ.

**ಅ**ಸಂಖ್ಯ ವೈವಿಧ್ಯದಿಂದ ಕೂಡಿದ ವಿಶ್ವವನ್ನು ಸಮಗ್ರವಾಗಿ ನೋಡಲಾಗದು ಎಂಬುದನ್ನು ಅರಿತ. ಆದ್ದರಿಂದಲೇ ಅದನ್ನು ಸಂಪೂರ್ಣ ಅರಿವ ಹವ್ಯಾಸ ಬಿಟ್ಟು, ಯಾವುದನ್ನು ತಿಳಿದರೆ ಎಲ್ಲ ತಿಳಿದಂತೆಯಾದೀತೋ ಅದನ್ನು ಶೋಧಿಸಹೊರಟ. ಆ ಋಷಿ ಹೇಳಿದ ಮಾತು ಶತಶಃ ಸತ್ಯ. ವಿಶ್ವವನ್ನಾಗಲಿ, ವಸ್ತುವನ್ನಾಗಲಿ ಪೂರ್ಣತಃ ಅರಿಯಲು ಆಗದು. ಮನೆಯೊಳಗೆ ಯಜಮಾನ ಹೆಂಡತಿ ಮಕ್ಕಳ ಕೂಡಿ ದಶಕ ದಶಕ ವರುಷ ಬದುಕು ನಡೆಸುತ್ತಾನೆ. ಆದರೂ ಅವನಿಗೆ ಅವರ ಸ್ವಭಾವ, ಅವರ ಅಂತರಂಗ ಸಂಪೂರ್ಣವಾಗಿ ತಿಳಿಯದು. ಎಂಥ ಜಾಣರಿಗೂ ಅಷ್ಟೇ. ಹೀಗಿರುವಾಗ ಎಲ್ಲವನ್ನು ತಿಳಿಯುತ್ತೇವೆ ಎಂದು ಭಾವಿಸುವುದು ಭ್ರಮೆಯೇ !

**ವಿ**ಶ್ವದ ಸ್ವರೂಪ ನಿರ್ಧರಿಸಲು ಹೊರಟ ಚಿಂತಕರು ವಿಭಿನ್ನ ತತ್ತ್ವಜ್ಞಾನ ಮಂಡಿಸಿದರು. ಒಬ್ಬರು ಸತ್ಯವೆಂದರು; ಒಬ್ಬರು ಅಸತ್ಯವೆಂದರು; ಒಬ್ಬರು ಮಿಥ್ಯ (ಮಾಯೆ) ಎಂದರು. ಪಶ್ಚಿಮದ ಒಬ್ಬ ಮಹಾನುಭಾವನಂತೂ 'ತಿಳಿಯಲಾಗದು'; ವಿಶ್ವ ಅಜ್ಞೇಯವಾಗಿದೆ ಎಂದು ನಿರ್ಣಯಿಸಿದ. ವಿಶ್ವವು ತಿಳಿದಂತೆ ಭಾಸವಾಗುತ್ತದೆ; ಆದರೆ ಅದೆಲ್ಲ ಆಭಾಸವೇ. ವಿಶ್ವ ಕೇವಲ ವಿವಿಧ ಮುಖ ಹೊಂದಿದೆ ಎಂದಲ್ಲ; ಕ್ಷಣ ಕ್ಷಣಕ್ಕೂ ಅವು ಬದಲಾಗುತ್ತಿವೆ. ಹೀಗಾಗಿ 'ಇದಂ ಇತ್ಥಂ' ಎಂದು ನಿರ್ಧರಿಸುವುದೇ ಕಷ್ಟ!

**ವಿ**ಜ್ಞಾನಿಗಳೂ ಪ್ರಯತ್ನಿಸಿದ್ದಾರೆ. ಮೊದಲು ಘನವಾದ ಅಣು ಇದೆ ಎನಿಸಿತು ವಸ್ತುವಿನಲ್ಲಿ, ಬಳಿಕ ಆ ಅಣು ಪ್ರೋಟಾನ್ ನ್ಯೂಟ್ರಾನ್ ಇಲೆಕ್ಟ್ರಾನ್‌ಗಳಿಂದ ಕೂಡಿದೆ ಎಂದು ಕಾಣಬಂತು. ಇದೀಗ ಅಣುವಿನಲ್ಲಿ ಮೂರಲ್ಲ, ಹಲವಾರು ದಶ ಉಪಾಂಗಗಳಿರುವುದು ತಿಳಿದು ಬಂದಿದೆ. ಅಷ್ಟೇ ಏಕೆ, ಅಣುವೆಂಬುದೆಲ್ಲ ಶಕ್ತಿ-ಗುಳ್ಳೆ ಎಂದೂ ಕಂಡುಕೊಂಡಿದ್ದಾನೆ. ಇನ್ನೂ ಅಂತಿಮ ನಿರ್ಧಾರವೇನಿಲ್ಲ!

**ಇ**ದನ್ನೆಲ್ಲ ಅರಿತ ಋಷಿ ವಿಶ್ವವರಿವ ಗೊಡವೆ ಬಿಟ್ಟು ತನ್ನ ಸ್ವರೂಪ ಜಾನಿಸುವ ಸಾಹಸಕ್ಕೆ ತೊಡಗಿದ. ಅಂತರಂಗದಲ್ಲಿ ಇಣುಕಿದ. ಅದ್ಭುತ ! ಹೊರ ಜಗತ್ತಿಗಿಂತ ಕ್ಲಿಷ್ಟವೂ ವೈವಿಧ್ಯ ಪೂರ್ಣವೂ ಕ್ಷಣಿಕವೂ ಆದ ಭಾವ, ವಿಚಾರ, ಕಾಮನೆ ಮುಂತಾದ ವುಗಳಿಂದ ಕೂಡಿದ ಮನೋಜಗತ್ತು ಕಾಣಬಂತು ! ಅದು ಅದ್ಭುತ, ಅತ್ಯಂತ ಅಸ್ಥಿರ.

**ಹೊ**ರ ಜಗತ್ತು ಅಷ್ಟು ತೀವ್ರ ಬದಲಾಗದು. ಇಂದು ನೋಡಿದ ಮನೆಮಾರು ನಾಳೆ ಹಾಗೆಯೇ ಇರುತ್ತವೆ. ಒಳಗೆ ಹಾಗಲ್ಲ. ಈಗ ಪ್ರೇಮಧಾರೆ ಕಂಡರೆ, ಇನ್ನೊಂದು ಕ್ಷಣಕ್ಕೆ ದ್ವೇಷಾಗ್ನಿ ಹೊತ್ತಿ ಉರಿವುದ ಕಾಣಬಹುದು !

**ಹೊ**ರಗಿನದ ತಿಳಿದುಕೊಳ್ಳುವುದಕ್ಕಿಂತ ಒಳಗಿನದ ತಿಳಿದುಕೊಳ್ಳುವುದು ಬಹಳ ಸುಲಭವೆನ್ನಿಸಿತು, ಋಷಿಗೆ ಮೊದಲು. ಆದರೆ ಒಳನೋಡಿದಾಗ ತಿಳಿದುಬಂತು-ಹೊರಗಿನವಕ್ಕಿಂತ ಕಷ್ಟವೆಂದು. ಹೊರಗಿನ ವಸ್ತುವ ಹಿಡಿಯಬಹುದು. ಅದನ್ನು ಎಣಿಸಬಹುದು. ತೂಗಬಹುದು. ಆದರೆ ಒಳಗಿದನ್ನು ತೂಕ ಮಾಡಬರದು, ಎಣಿಸಬರದು, ಅದನ್ನು ಹಿಡಿಯಬರದು. ಅಲ್ಲದೆ ಎರಡು ಕ್ಷಣ ಕೂಡಾ ಯಾವುದೇ ಭಾವತರ ಒಂದೇ ರೀತಿಯಾಗಿ ಅಲ್ಲಿರದು. ಇಂಥ ಮನಸ್ಸನ್ನು ತಿಳಿದುಕೊಳ್ಳುವುದು ಹೇಗೆ? ವಿಚಾರ ಮಾಡಿ ಕೊನೆಗೆ ನಿರ್ಣಯ ಮಾಡಿದ: ಹೊರಗಿನದನ್ನು ತಿಳಿದುಕೊಳ್ಳುವ ಗೊಡವೆ ಪ್ರಯಾಸ ಬೇಡ. ಅವೆರಡನ್ನೂ ತಿಳಿಯಲಿಚ್ಛಿಸುವ **'ನಾನು'** ಇದ್ದೇನಲ್ಲ, ಈ ನನ್ನನ್ನೇ ಮೊದಲು ತಿಳಿಯೋಣ ಎಂದು. ಹೊರಗಿನದನ್ನು ತಿಳಿಯ ಲೆಳಸಿದವ ಭೌತಸಂಶೋಧಕ. ಒಳಗಿನದನ್ನು ಅರಿಯ ಲೆಳಸಿದವ ಮನಸ್ಸಂಶೋಧಕ. ಋಷಿಯು ಎರಡು ಕ್ಷೇತ್ರ ದಾಟಿ ಆತ್ಮಕ್ಷೇತ್ರದ ಶೋಧಕ್ಕೆ ತೊಡಗಿದ. ಆತ ಆತ್ಮಶೋಧಕ. ಆತ ಶೋಧಿಸುತ್ತ ಸಾಗಿ ಹೊರಜಗತ್ತು ಹಾಗೂ ಮನಸ್ಸಿನ ಭಾವಜಗತ್ತು ಕಾಣದ ನೆಲೆಗೆ ತಲುಪಿದ. ಅಲ್ಲಿ ತಾನು ಇದ್ದ ! ಇನ್ನೇನೂ ಇರಲಿಲ್ಲ ! ಅದು ಬರಿ ಅರಿವು. ಬರಿ ಇರವು ! ಅದು 'ಅವ್ಯಾಕೃತ', ಅದು ಸತ್ಯ ! ಶಬ್ದಕ್ಕೆ ನಿಲುಕದ ಸ್ಥಿರ ತತ್ತ್ವ ! ಅಲ್ಲಿ ಎಲ್ಲವೂ ಶಾಂತವಾಗಿತ್ತು, ಕಾಲ ಕೂಡ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಋಷಿ ಅಮೃತ ಸತ್ಯಮಂಡಲ ತಲುಪಿದ್ದ! ಅವನ ಮುಖದಿಂದ ಒಂದು ಮಾತು ಹೊಮ್ಮಿತು ಆ ಸ್ಥಿತಿ ಕುರಿತು. 'ದ್ರಷ್ಟಾದೃಶಿಮಾತ್ರಃ ಶುದಃ ಅಪಿ ಪ್ರತ್ಯಯಾನುಪಶ್ಯಃ ॥'

**ಹೊ**ರಗಿನದು ದೃಶ್ಯ, ನಾನು ದ್ರಷ್ಟಾ! ನೋಡುವವ. ಈ ದೃಶ್ಯ ವಸ್ತುವನ್ನು ಕಾಣಬೇಕಾದರೆ ಮನಸ್ಸು ಬೇಕಾಗುತ್ತದೆ. ಮನಸ್ಸಿನೊಳಗೆ ಆ ದೃಶ್ಯ ವಸ್ತುವಿನ ಚಿತ್ರ ಮೂಡಿಕೊಂಡಿರುತ್ತದೆ. ಅದು 'ವೃತ್ತಿ' ಮನಸ್ಸಿನ ತೆರೆ. ಆ ಮನಸ್ಸಿನಲ್ಲಿ ಮೂಡಿದಂಥ ಚಿತ್ರವನ್ನು ನಾನು ನೋಡುತ್ತೇನೆ. ಮನಸ್ಸಿನಲ್ಲಿ ಮೂಡಿದ ದೃಶ್ಯ ಚಿತ್ರವನ್ನು ನೋಡುತ್ತಿರುವ ನಾನು ದ್ರಷ್ಟಾ, ವ್ಯತ್ಯಾತ್ಮಕ ಮನಸ್ಸಿನಲ್ಲಿ ಇರುವ ಚೇತನವದು. ಉದಾ : ಹೂವು ಹೊರದೃಶ್ಯ. ಅದರ ಮಾನಸಿಕ ಚಿತ್ರವು ಆಂತರಿಕ ದೃಶ್ಯ. ಆ ಎರಡೂ ದೃಶ್ಯಗಳ ಜ್ಞಾನವಾಗುತ್ತದಲ್ಲ ಅದು ಪ್ರತಿಭಾನ. ಅದನ್ನುಳ್ಳ ಚೇತನವೆ 'ದ್ರಷ್ಟಾ!' ಅರಿವ ವಸ್ತು, ಜ್ಞಾನವುಳ್ಳ ತತ್ತ್ವ, ಅದೇ 'ನಾನು'. ಅದು ನಿತ್ಯಜ್ಞಾನರೂಪ. ಅರಿವಿನ ಅಂತರ್ಜ್ಯೋತಿ! ಋಷಿ ಅರಿತಿದ್ದ. ದ್ರಷ್ಟಾ ವಸ್ತು ಕೇವಲ ದೃಶಿಯಾಗಿದೆ; ಅರಿವಿನ ಘನವಾಗಿದೆ ಎಂಬುದನರಿತಿದ್ದ.

**ದ್ರ**ಷ್ಟಾ ಯಾವಾಗ? ದೃಶ್ಯ ಇರುವಾಗ ಮಾತ್ರ! ನೋಡಿಸಿಕೊಳ್ಳುವ ವಸ್ತು ಇರುವವರೆಗೆ ನೋಡುವವ ಎಂಬ ಭಾವ. ದೃಶ್ಯ ಎಂಬುದೂ ಹಾಗೆಯೇ. ದ್ರಷ್ಟಾ ಭಾವ ಇರುವವರೆಗೆ ದೃಶ್ಯ! ಅವೆರಡೂ ಪರಸ್ಪರಾವಲಂಬಿಗಳು. ಸಾಪೇಕ್ಷ ಕಲ್ಪನೆಗಳು. ಎಡ-ಬಲ, ಮೇಲೆ-ಕೆಳಗೆ ಮುಂತಾದವುಗಳು ಇರುವಂತೆ. ಈ ಸಾಪೇಕ್ಷಕ್ಷೇತ್ರ ದಾಟಲಿಚ್ಛಿಸಿದ ಋಷಿ. ದೃಶ್ಯಭಾವ ತೊರೆದರೆ ಏನು ಉಳಿಯಬಹುದು ಎಂಬ ಕುತೂಹಲ. ದೃಶ್ಯ-ವೃತ್ತಿಗಳನ್ನೆಲ್ಲ ಅಡಗಿಸಿದ. ಆಗ ಹೊರಜಗತ್ತೂ ಮರೆ, ಒಳ ಜಗತ್ತೂ ಮರೆ. ಆಗ ಎಲ್ಲ 'ಖಾಲಿ'ಯಾಗಿತ್ತು ಅಂತರಂಗ! ದೃಶ್ಯ ದ್ರಷ್ಟಾ ಎರಡೂ ಕಲ್ಪನೆಗಳು ಅಡಗಿದ್ದವು.

**ಮ**ನಸ್ಸಿನೊಳಗೆ ಏನೂ ಇರಲಿಲ್ಲ, ಯಾವುದೂ ಇರಲಿಲ್ಲ. ಬರಿದಾಗಿತ್ತು. ಈ ಬರಿದಾದ ಮನಸ್ಸಿಗೆಯೇ 'ಅಮನ' ಎನ್ನುವುದು. ಆ ಅಮನದಲ್ಲಿ ಅರಿವಿನ ಬೆಳಕು! ಬೇರೆ ದೃಶ್ಯವಿರಲಿಲ್ಲ, ಕೇವಲ ಚೇತನ ಪ್ರಕಾಶ. ಅದು ದೃಶ್ಯವಲ್ಲ, ದ್ರಷ್ಟವಲ್ಲ, ಅದು ಕೇವಲ ದೃಶಿ. ಅದನ್ನು ಋಷಿ ಅನುಭವಿಸಿದ. ಅನುಭಾವಿಯಾದ! ಸತ್ಯದರ್ಶಿ! ಸತ್ಯ ಸಾಕ್ಷಾತ್ಕಾರಿಯಾದ! ಮಹಾಪ್ರಾಜ್ಞನಾದ! ಎಂಥ ಶೋಧ ಅವನದು!

ಈ ಪ್ರಥಮ ಋಷಿಯ ಅಪ್ರತಿಮಾನುಭವ ಸಾಂಸಾರಿಕ ಗದ್ದಲದಲ್ಲಿರುವ ನಮಗೆ ಹೇಗೆ ಭಾವಕ್ಕೆ ಬಂದೀತು? ಸದಾ ದೃಶ್ಯ, ದ್ರಷ್ಟಾ ಸ್ಥಾನಿಕರು ನಾವು. ಮುಂಬೈ ಪಟ್ಟಣ. ದೊಡ್ಡ ರಸ್ತೆಯ ಎದುರಿಗೆ ಚಿಕ್ಕ ಮನೆ. ಹಗಲು ರಾತ್ರಿ ಸಾವಿರಾರು ವಾಹನಗಳ ಓಡಾಟ. ಚಿಕ್ಕ ಮನೆ. ಹಗಲು ರಾತ್ರಿ ಸಾವಿರಾರು ವಾಹನಗಳ ಓಡಾಟ. ವಿಪರೀತ ಧ್ವನಿ! ಧ್ವನಿಮಾಲಿನ್ಯ. ಅದರಲ್ಲಿ ಬಾಳುವವನಿಗೆ 'ನಿಶ್ಯಬ್ದತೆ'ಯ ಅನುಭವ ಹೇಗೆ ಸಾಧ್ಯ? ಹಾಗೆ ನಮ್ಮ ಸ್ಥಿತಿ. ಕೇವಲ ಧ್ವನಿ ಮಾಲಿನ್ಯವಲ್ಲ ನೂರಾರು ಭಾವ ಮಾಲಿನ್ಯದಲ್ಲಿ ಮನೆ ಮಾಡಿಕೊಂಡು ಬಾಳುತ್ತಿರುವ ನಮಗೆ ಆ ಅನಂತ ದೃಶಿ-ಮೌನದ ಅನುಭವ ಎಲ್ಲಿ ಬಂದೀತು?

**ಒಂ**ದು ಸಣ್ಣ ಕಥೆ, ಜಪಾನ ದೇಶ. ಶ್ರೇಷ್ಠ ಗುರು ಇದ್ದ. ಆ ಗುರುವಿನ ಸನ್ನಿಧಿಗೆ ಒಬ್ಬ ವ್ಯಕ್ತಿ ಬಂದ. ಸತ್ಯವನ್ನು ಅರಿತುಕೊಳ್ಳಬೇಕೆಂದು ಬಹಳಷ್ಟು ಕಷ್ಟಪಡುತ್ತಲಿದ್ದವ. ವರ್ಷ ವರ್ಷಗಳೇ ಉರುಳಿ ಹೋಗಿತ್ತು. ಅನೇಕ ವರ್ಷಗಳ ನಂತರವೂ ಕೂಡಾ ಅವನಿಗೆ ಸತ್ಯ ದರ್ಶನ ಆಗಿರಲಿಲ್ಲ. ಆ ನೋವು ಮನಸ್ಸಿಗೆ ಇತ್ತು.

**ಗು**ರುವಿನ ಹತ್ತಿರ ವಾಸಿಸುತ್ತಿದ್ದ. ಸತ್ಯದರ್ಶನದ ಕ್ಷಣಕ್ಕಾಗಿ ಕಾಯುತ್ತಿದ್ದ. ಒಂದು ದಿನ ಗುರುವು ನೀರು ತುಂಬಿದ ಗಡಿಗೆ ಕೊಟ್ಟು 'ಇದನ್ನು ಆಚೆಯ ಮಠಕ್ಕೆ ತಲುಪಿಸಿ ಬಾ' ಎಂದ. ಆ ಶಿಷ್ಯ ಹೊರಟ. ಮೇಲೆ ಚಂದ್ರ. ಗಡಿಗೆಯ ನೀರಿನಲ್ಲಿ ಚಂದ್ರಬಿಂಬ. ಸುಂದರ. ಅದನ್ನು ನೋಡುತ್ತ ನಡೆದಿದ್ದ. ಮಧ್ಯದಲ್ಲಿ ಟೊಂಗೆಗೆ ತಪ್ಪಿ ಹಾಯ್ದು ಗಡಿಗೆ ಒಡೆಯಿತು. ನೀರು ಚೆಲ್ಲಿತು. ನೀರ-ಚಂದ್ರ ಅಡಗಿದ್ದ! ಎಲ್ಲ ಬಯಲು! ಮರೆ! ಆ ಬರಿದಾದ ಕ್ಷಣದಲ್ಲಿ ಅವನಿಗೆ ಸತ್ಯ ಹೊಳೆಯಿತು. ಮನಸ್ಸು ಬರಿದಾಗಿತ್ತು ಅದರಲ್ಲಿ ನೀರಿಲ್ಲ, ಚಂದ್ರನಿಲ್ಲ; ನೋಡುವ ದ್ರಷ್ಟಾ ಇಲ್ಲ, ಕೇವಲ 'ತಾನು'! ಏನೇನೂ ಇಲ್ಲದ ಇರುವಿಕೆ! ಅದು ನಿರ್ವಾಣ! ಇಲ್ಲ ಅನ್ನುವುದರ ದಿವ್ಯದರ್ಶನ ಉಂಟಾಗಿತ್ತು. ಆ ಇಲ್ಲ ಅನ್ನುವುದನ್ನು ಪ್ರಕಾಶಿಸುತ್ತಿರುವ ದಿವ್ಯ ಸತ್ಯ ದರ್ಶನ ಉಂಟಾಗಿತ್ತು! ನಮ್ಮ ಕೊಡ ಎಷ್ಟು ಸಲ ಒಡೆದಿಲ್ಲ? ಓದಿ ಓದಿ ಪುಸ್ತಕ ಹರಿದು ಹೋಗಿವೆ. ಪೂಜೆ ಮಾಡಿ ಮಾಡಿ ಮೂರ್ತಿಗಳು ಸವೆದು ಹೋಗಿವೆ. ತಿರುಗಾಡಿ ತಿರುಗಾಡಿ ತೀರ್ಥಕ್ಷೇತ್ರಗಳೇ ಬರಿದಾಗಿವೆ. ಆದರೂ ನಮಗೆ ಹೊಳೆದಿಲ್ಲ; ಹೊಳೆವ ಕ್ಷಣ ನಾವು ಬಳಸಿಕೊಂಡಿಲ್ಲ.

**ತು**ಳಸೀದಾಸ ಒಳಗೆ ಹೋದ. ಹೆಂಡತಿ ಕೇಳಿದಳು 'ಏಕೆ ಬಂದಿರಿ ಈ ಭಯಾನಕ ರಾತ್ರಿಯೊಳಗೆ? ನನ್ನ ಮೇಲೆ ಇಷ್ಟು ಮೋಹಮಾಡುವ ಬದಲು ದೇವರ ಮೇಲೆ ಮಾಡಿದ್ದರೆ ಇಷ್ಟೊತ್ತಿಗೆ ಸಂತರಾಗುತ್ತಿದ್ದಿರಿ' ಎಂದಳು. ಆ ಕ್ಷಣ ಆತನಿಗೆ ಹೊಳೆಯಿತು. ಇಂಥ ಘಟನೆ ಒಂದಲ್ಲ ಒಂದು ರೀತಿಯಲ್ಲಿ ಎಲ್ಲರ ಜೀವನದಲ್ಲಿ ನಡೆದಿವೆ. ಆದರೆ ತುಳಸೀದಾಸ ಆ ಕ್ಷಣವನ್ನು ಬಳಸಿದಂತೆ ನಾವೆಲ್ಲಿ ಬಳಸಿದ್ದೇವೆ? ಯಾರು ಏನೆಂದರೂ ನಾವೆಲ್ಲಿ ಮನಸ್ಸಿಗೆ ಹಚ್ಚಿಕೊಂಡಿದ್ದೇವೆ ಹೇಳಿ?

**ಎಷ್ಟು** ಸಲ ನಾವು ನೋಡಿಲ್ಲ ನೀರು ಚೆಲ್ಲಿದುದ? ಆದರೆ ಆ ಘಟನೆಯನ್ನು, ಆ ಚೆಲ್ಲಿದ ಸನ್ನಿವೇಶವನ್ನು ಆತ್ಮ ಸಾಕ್ಷಾತ್ಕಾರಕ್ಕಾಗಿ ಬಳಸಿಕೊಳ್ಳುವ ಮಾನಸಿಕ ಸಿದ್ಧತೆ ನಮಗೆಲ್ಲಿ? ಸಿದ್ಧತೆ ಇದ್ದರೆ ಒಂದು ಕ್ಷಣದಲ್ಲಿ ಸಾಕ್ಷಾತ್ಕಾರ! ಕಡ್ಡಿಗೆ ಬೆಂಕಿ ಹತ್ತುವುದೇನು ತಡ? ಆದರೆ ನಿಧಾನವಾಗಿ ದಿನದ ತುಂಬ ಕೆರೆದರೂ ಬೆಂಕಿ ಕಡ್ಡಿ ಹೊತ್ತದು. ಹಾಗೆ ಅಭೀಪ್ಸೆ ಇರದೆ ಒಂದು ನೂರು ವರ್ಷ ಓದುತ್ತ ಕೇಳುತ್ತ ಕುಳಿತರೇನಾಗುತ್ತದೆ?





**ಸ**ತ್ಯವನ್ನು ಬಾಹ್ಯದಲ್ಲಿ ಹುಡುಕುವುದಲ್ಲ. ಹಾಗೆ ಹುಡುಕಿದರೆ ಅದು ಸಿಗುವುದೂ ಕಷ್ಟ. ಅದು ಹುಡುಕುವವನ ಒಳಗಿದೆ; ಕಾಣುವ ವಸ್ತುವಿನ ಆಚೆಯಿದೆ! ಬಾಹ್ಯದಲ್ಲಿ ಅಥವಾ ಭಾವಜಗತ್ತಿನಲ್ಲಿ ಹುಡುಕುತ್ತಿರುವವರೆಗೆ ನಮ್ಮ ಕಡೆ ನಮ್ಮ ಲಕ್ಷ್ಯ ಹರಿಯುವುದಿಲ್ಲ. ಹುಡುಕುವುದು ನಿಂತಾಗ ಅನುಭವಕ್ಕೆ ಬಂದೀತು. ಗುಪ್ತ ಮಂಚಣ್ಣನವರ ಈ ವಚನ ಕೇಳಿ.

*ಮರಾಳನ ಮಾಟದಂತೆ, ಮಯೂರನ ನಿದ್ರೆಯಂತೆ,*
*ಮಾರ್ತಾಂಡನ ಕಿರಣದಂತೆ, ಸ್ಫಟಿಕದ ಘಟದಂತೆ,*
*ಹೊದ್ದಿಯೂ ಹೊದ್ದದಂತೆ, ಇದ್ದೂ ಇಲ್ಲದಂತೆ,*
*ಕಂಡೂ ಕಾಣದಂತೆ, ಕೇಳಿಯೂ ಕೇಳದಂತೆ ಇಪ್ಪ*
*ಸುಳಿವ ಜಂಗಮೂರ್ತಿ ಕಂಡು*
*ನಮೋ ನಮೋ ಎಂಬೆ ನಾರಾಯಣ ಪ್ರಿಯ ರಾಮನಾಥ*

ಮರಾಳ ಎಂದರೆ ಮೇಘ. ಅರುಣನ ಸ್ವರ್ಣವರ್ಣ ಅದನ್ನು ಮೆತ್ತಿದೆ. ಭೂಮಿಯ ಮೇಲೆ ನಿಂತುನೋಡುವ ಕವಿಗೆ ಭಾವೋನ್ಮಾದವಾಗಬೇಕು ಅಂಥ ರಂಗವಿನ್ಯಾಸ; ಮೇಘದ ಮಾಟ. ಆದರೆ ಅದೆಲ್ಲ ನೋಡಲಷ್ಟೇ. ಅಲ್ಲಿ ಏನಿದೆಯೆಂದು ಮೋಡ ಮಂಡಲಕ್ಕೇರಿದರೆ ಅಲ್ಲೇನಿದೆ? ಎಲ್ಲ ಬರೀ ಆವಿ! ಮರಾಳದ ಮಾಟ ಕೇವಲ ಅನುಭವಿಸಬೇಕು. ಹುಡುಕುವುದಲ್ಲ!

**ಮಾ**ರ್ತಾಂಡ ಕಿರಣ, ಸೂರ್ಯರಶ್ಮಿ, ಅವು ಎಲ್ಲೆಡೆ ಹರಡುತ್ತವೆ. ಎಲ್ಲ ವಸ್ತುಗಳು ಆಗ ಗೋಚರಿಸುತ್ತವೆ. ಉದಾ : ಗುಲಾಬಿ ಹೂ. ಕಿರಣಗಳು ಅದನ್ನಾವರಿಸಿದಾಗ ಹೂ ಕಾಣುತ್ತದೆ. ಆದರೆ ಆಶ್ಚರ್ಯದ ಸಂಗತಿಯೆಂದರೆ ನಾವು ಗುಲಾಬಿಯನ್ನು ನೋಡಿಯೇ ಇಲ್ಲ; ಅದರಿಂದ ಪರಾವೃತ್ತವಾದ ಕಿರಣಗಳನ್ನು ನೋಡಿದ್ದೇವೆ. ಅಥವಾ ಇನ್ನೂ ಸೂಕ್ಷ್ಮವಾಗಿ ಹೇಳುವುದಾದರೆ, ಕಿರಣಗಳನ್ನೂ ನಾವು ನೋಡಿಲ್ಲ, ಕಿರಣಗಳು ರೆಟಿನಾದ ಮೇಲೆ ಮಾಡುವ ಪರಿಣಾಮವನ್ನು ಅನುಭವಿಸಿದ್ದೇವೆ! ಎಷ್ಟು ವಿಚಿತ್ರ! ಸೂರ್ಯ ಕಿರಣಗಳು ಕಂಡಿವೆ. ಅವು ಏನು? ಎಂದು ಶೋಧಿಸಹೋದರೆ ನಾವು ಕಂಡೇ ಇಲ್ಲ! ಅವು ಕೇವಲ ಫೋಟಾನ್-ಸ್ಪಂದನಗಳು! ಕಾಣದ ಕಂಪನಗಳು. ಆದರೂ ಕಂಡ ಭಾವ!

**ಸ್ಫ**ಟಿಕದ ಕೊಡ. ಹಾಲಿನಿಂದ ತುಂಬಿದೆ. ಆಗ ಅದು ಬೆಳ್ಳಗೆ ಕಾಣುತ್ತದೆ. ಆದರೆ ಸ್ಫಟಿಕ ಬೆಳ್ಳಗಿಲ್ಲ. ಅದು ಪಾರದರ್ಶಕ. ಅದರದೇ ಬಣ್ಣ ಅದಕ್ಕಿಲ್ಲ. ಯಾವುದು ನಮಗೆ ಕಂಡಿದೆ. ಅದು ಸ್ಫಟಿಕ ಕಲಶ-ವರ್ಣವಲ್ಲ. ಹಾಲ ವರ್ಣ. ಆದರೇನು ಸ್ಫಟಿಕ ಕಲಶ ಕಂಡ ಭ್ರಮೆ ನಮಗೆ. ಕಂಡುದು ಏನು ಎಂದು ನೋಡ ಹೋದರೆ ಆ ಬಣ್ಣ ಅಲ್ಲಿ ಇಲ್ಲವೇ ಇಲ್ಲ!

**ಈ** ದೃಷ್ಟಾಂತಗಳಲ್ಲಿರುವ ಮೂರು ವಸ್ತುಗಳು ಕಂಡೂ ಕಂಡಿಲ್ಲ; ಹೊದ್ದಿಯೂ ಹೊದ್ದಿಲ್ಲ; ಇದ್ದರೂ ಇಲ್ಲದಂತೆ! ಎಂಥ ಮಾರ್ಮಿಕ ದೃಷ್ಟಾಂತಗಳು!

**ಅ**ವುಗಳಂತೆ ಜಂಗಮ! ''ಪ್ರಪಂಚ ಹೊದ್ದಿಯೂ ಹೊದ್ದದಂತೆ ಲೋಕದಲ್ಲಿ ಇದ್ದೂ ಇರದಂತೆ ಎಲ್ಲ ನೋಡಿಯೂ ನೋಡದಂತೆ, ಕೇಳಿಯೂ ಕೇಳದಂತೆ''! ಗುಪ್ತ ಮಂಚಣ್ಣ ಬಸವಣ್ಣನನ್ನು ವರ್ಣಿಸಿದ ಅದ್ಭುತ ರೀತಿಯಿದು. ಬಸವಣ್ಣನವರ ಸುತ್ತ ಧರ್ಮ-ಸಮಾಜ-ಪ್ರಪಂಚ ಹರವಿತ್ತು. ನೂರಾರು ಸಾವಿರಾರು ಜನ ಅತಿಥಿ ಅಭ್ಯಾಗತರು. ಎಲ್ಲದರ ಮಧ್ಯದಲ್ಲಿದ್ದೂ ಇರದಂತೆ, ಎಲ್ಲ ಒಳಿತು-ಕೆಡಕುಗಳ ಕಂಡು, ಕೇಳಿ, ಶ್ರಮಿಸಿ ನೋವು ನಲಿವುಗಳ ಅನುಭವಿಸಿ ಮತ್ತೆಯೂ ನಿರ್ಲಿಪ್ತವಾಗಿರುವ ಅಣ್ಣನವರನ್ನು ಮಂಚಣ್ಣ ಪ್ರಪಂಚ ಹೊದ್ದದ ಜಂಗಮನೆಂದು ಕೊಂಡಾಡಿದ! ಅದು ಬಸವಣ್ಣನವರ ಹಿರಿಮೆ; ಪಾರಮಾರ್ಥಿಕ ಮಹತ್ತಾದನೆ. ಅಲ್ಲಮರೂ ಕೂಡ ಜಗತ್ತಿನೊಳಗೆ ಭಕ್ತಿಯ ಬೆಳೆ ಬೆಳೆದದ್ದೇ ಬಸವಣ್ಣನಿಂದ ಎಂದು ಕೊಂಡಾಡಿದರು.

**ಬ**ಸವಣ್ಣನ ನಿರ್ಲಿಪ್ತ ಜೀವನವನ್ನು ಈ ವಚನ ವರ್ಣಿಸುತ್ತದೆ. ಇದು ನಿರ್ಲಿಪ್ತವಾದ ಅದ್ಭುತ ಜೀವನ. 'ದ್ರಷ್ಟಾ ದೃಶಿಮಾತ್ರಃ' ದೃಶಿ ಅವಸ್ಥೆ ಅನುಭವಿಸಿದ ವ್ಯಕ್ತಿ ಜಗತ್ತಿನಲ್ಲಿ ಹೇಗೆ ಬದುಕುತ್ತಾನೆ ಎಂದರೆ ಅನಪಶ್ಯಃ, ಮನಸ್ಸಿನೊಂದಿಗೆ ಮನಸ್ಸಾಗಿ, ಬುದಿಯೊಂದಿಗೆ ಬುದಿಯಾಗಿ! 'ಶುದಃ ಅಪಿ ಪ್ರತ್ಯಯಾನುಪಶ್ಯಃ' ಆ ಪರಿಶುದತೆಯ ಅನುಭೂತಿಯನ್ನು ಮಾಡಿಕೊಂಡಿರುವ ಈತ ಜ್ಞಾನಿ, ಮಹಾನುಭಾವ. ನಾವು ಹೇಗೆ ವರ್ತಿಸುತ್ತಿರುತ್ತೇವೆ ಹಾಗೆ ವರ್ತಿಸುತ್ತಿರುತ್ತಾನೆ. ಪ್ರತ್ಯಯಗಳ ಮೂಲಕವೇ ನೋಡುತ್ತಾ ಇರುತ್ತಾನೆ. ಮನಸ್ಸಿನ ವೃತ್ತಿಗಳ ಮೂಲಕ ಜಗತ್ತನ್ನು ಅನುಭವಿಸುತ್ತ ಇರುತ್ತಾನೆ. ಆದರೆ ದೃಶಿಮಾತ್ರಃ! ದೃಶಿ ಮಾತ್ರನಾಗಿ! ಸಾಕ್ಷಿಯಾಗಿ!

**ದೃ**ಶಿ ಅನುಭೂತಿಯುಳ್ಳವ ದ್ರಷ್ಟಾರ, ಋಷಿ. ಆತ ಮನಃ ಪ್ರತ್ಯಯಗಳ, ವೃತ್ತಿಗಳ ಮೂಲಕ ಜಗತ್ತಿನಲ್ಲಿ ವ್ಯವಹರಿಸುತ್ತಾನೆ. ಆದರೆ ಅಂತರಂಗದಲ್ಲಿ ಅತ್ಯಂತ ನಿರ್ಲಿಪ್ತ ನಿರಾಮಯನಾಗಿರುತ್ತಾನೆ. ಬಹಿರಂಗದಲ್ಲಿ ಸಾಂಸಾರಿಕ ಹೊಣೆ ಹೊರುತ್ತಾನೆ. ಅಂತರಂಗದಲ್ಲಿ ಹೊದ್ದಿರುವುದಿಲ್ಲ. ಬಹಿರಂಗದಲ್ಲಿ ಲೌಕಿಕನಾಗಿರುತ್ತಾನೆ. ಅಂತರಂಗದಲ್ಲಿ ಇರುವುದಿಲ್ಲ. ಬಹಿರಂಗದಲ್ಲಿ ಎಲ್ಲ ನೋಡುತ್ತಾನೆ. ಅಂತರಂಗದಲ್ಲಿ ನೋಡುವುದಿಲ್ಲ! ಬಹಿರಂಗದಲ್ಲಿ ಸ್ತುತಿ-ನಿಂದೆಗಳ ಕೇಳುತ್ತಾನೆ. ಅಂತರಂಗದಲ್ಲಿ ಕೇಳುವುದಿಲ್ಲ! ಅಂತರಂಗದಲ್ಲಿ ಪ್ರಶಾಂತ ಮಹಾಮೌನ!

**ಅಂ**ತರಂಗದಲ್ಲಿ ಜೀವನ್ಮುಕ್ತ ಬಹಿರಂಗದಲ್ಲಿ ಕರ್ಮಯೋಗಿ! ಇದು ಅತ್ಯಂತ ಮಧುರವಾದ ಭಗವತ್-ಜೀವನ! ಇಂತಹ ಜೀವನ ಸಾಧನೆಗಾಗಿ ಚಿಂತನ. ಈ ಚಿಂತನ 'ದೃಶಿಚಿಂತನ'!

(ಕೃಪೆ : ಭಗವಚ್ಚಿಂತನ)



# ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಈಚಿನ ಶೋಧಗಳು

– ಡಾ. ಎಂ.ಜಿ. ನಾಗರಾಜ್ *

## ಸಿದ್ಧಗಂಗಾ ಪರಿಸರದ ಪ್ರಾಗೈತಿಹಾಸಿಕತೆ

**ಪ್ರಾಗೈತಿಹಾಸಿಕ ಕ್ಷೇತ್ರ ಮಹತ್ವ:** ಕ್ಷೇತ್ರ ಎಂದರೆ ಪುಣ್ಯ ನೆಲೆ; ಸಿದ್ಧರ ಮುನಿಗಳ ತಾಣ. ಫಲವತ್ತಿನ ಪ್ರದೇಶ ಎಂಬ ಅರ್ಥಗಳಿವೆ. 'ಕ್ಷೇ' ಎಂದರೆ ವಾಸಿಸು ಎಂಬರ್ಥದಲ್ಲಿದೆ. 'ಕ್ಷೇತ್ರ' ಶಕ ಮೂಲ ಶಬ್ದವಾಗಿ 'ದೇಶ' ಎಂಬ ಅರ್ಥವನ್ನು ಪಡೆದಿದೆ.

ಸಿದ್ಧಗಂಗಾ ಕ್ಷೇತ್ರವು ಸಿದ್ಧರ ಕ್ಷೇತ್ರ, ಪುಣ್ಯ ಕ್ಷೇತ್ರವೆ. ಅಧ್ಯಾತ್ಮ ಸಾಧಿಸಿದಸಿದ್ಧರೂ ಅಲ್ಲಿ ಆಗಿ ಬಂದಿದ್ದಾರೆ; ಅದು ಗಂಗೆಯ ಉದ್ಭವ ನೆಲೆಯೂ ಆಗಿದೆ. ಗೋಸಲ ಸಿದ್ದೇಶ್ವರರಿಂದ ಸಂಭವ ಕಾರಣವೆನ್ನಲಾದ 'ಸಿದ್ಧಗಂಗೆ'ಯ ಕುಂಡಿಕೆ ಸಿದ್ಧಗಂಗಾ ಗಿರಿಯಲ್ಲಿದೆ. ಪ್ರಾಗ್ ಇತಿಹಾಸದ ದೃಷ್ಟಿಯಿಂದ ಕ್ರಿ.ಪೂರ್ವದಲ್ಲಿಯೆ ಇಲ್ಲಿ



ಶ್ರೀ ಗೋಸಲ ಸಿದ್ಧೇಶ್ವರರು

ಜನವಸತಿ ಇತ್ತು. ನಂತರ ಸಿದ್ಧರ, ಮುನಿಗಳ ವಾಸದ ಗವಿಪ್ರದೇಶವೂ ಆಗಿತ್ತು. ಈ ಸಿದ್ಧಗಂಗೆ ಗೋಸಲ ಸಾಧಿತ ಪವಿತ್ರ ಜಲಗಂಗೆಯ ಉದ್ಭವ ನೆಲೆ. ಪರಿಸರವೂ ಜಲಾನಯನ ವೈಖರಿಯ ಸಿದ್ಧರ ತಪೋವನವಾಗಿದ್ದ ಬೀಡು. ಕಾವ್ಯ ಸಾಹಿತ್ಯದಲ್ಲಿ ವರ್ಣನೆಗೊಂಡಿದೆ. ಸಾಂಸ್ಕೃತಿಕ ಮೌಲ್ಯದ ಮಠದ ನೆಲೆ ಆಗಿದೆ. ವೀರಶೈವ ಪರಂಪರೆಯ ಪ್ರಸಿದ್ಧ ಪ್ರದೇಶವಾಗಿದೆ. ೧೨ನೆಯ ಶತಮಾನದಲ್ಲಿ ಇದು ಶಿವಯೋಗಿಗಳ ಆಸರೆಯ ನೆಲೆಯಾಗಿತ್ತೆನ್ನಲಾಗಿದೆ. ೨೧ನೇ ಶತಮಾನದಲ್ಲಿ ಅದಕ್ಕೆ ಒದಗಿಸುವ ಸಹಜ ಪ್ರಸಿದ್ಧಿಗೆ, ಶತಾಯುಷ್ಯ ದಾಟಿದ ಕರ್ನಾಟಕ ರತ್ನ, ಬಸವ ಪ್ರಶಸ್ತಿ ಪುರಸ್ಕೃತರಾದ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಅವರ ನಿರಂತರ ಸತ್ಯಶುದ್ಧದ ಕಾಯಕದ ಸದ್‌ಫಲವೇ ಆಗಿದೆ. ತುಮಕೂರಿಗೆ ಪೂರ್ವಕ್ಕಿದ್ದು ಅದು ಪ್ರಾಚೀನದಲ್ಲಿ ಕೇತಸಮುದ್ರದ ಗ್ರಾಮದ ಭಾಗವಾಗಿತ್ತು.

ತುಮಕೂರು ಜಿಲ್ಲೆಯ ತುಮಕೂರಿನಿಂದ ಸುಮಾರು ೬ ಕಿ.ಮೀ. ದೂರದಲ್ಲಿ ಸಿದ್ಧಗಂಗಾ ಕ್ಷೇತ್ರವಿದೆ. ಕೇತಸಮುದ್ರದಿಂದ (ಕ್ಯಾತ್ಸಂದ್ರ) ಉತ್ತರಕ್ಕೆ ೫-೬ ನಿಮಿಷಗಳ ನಡಿಗೆಗೆ ಸಿದ್ಧಗಂಗಾ ಕ್ಷೇತ್ರ ಸಿಗುತ್ತದೆ. ಅಂದಿನ ಕೇತಸಮುದ್ರಕ್ಕೆ ಪ್ರಾಚೀನತೆಯ ಹಿರಿಮೆ ಇದ್ದರೆ. ಇಂದು



ಶ್ರೀ ಸಿದ್ಧಗಂಗಾ ತೀರ್ಥೋದ್ಭವ ಕುಂಡಿಕೆ

* ನಂ. ೨೨೧, 'ಅನರ್ಘ್ಯ', ಶ್ರೀ ಜ.ಚ.ನಿ. ಕೃಪೆ' ೬ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦







ಶ್ರೀ ಸಿದ್ಧಗಂಗಾ ಕ್ಷೇತ್ರದ ವಿಹಂಗಮ ನೋಟ

ಸಿದ್ಧಗಂಗೆಗೆ ಸಿದ್ಧಗರಿಮೆ ಇದೆ. ಕ್ಯಾತ್ಸಂದ್ರ (ಕೇತಸಮುದ್ರ) ಇಂದು ಸಿದ್ಧಗಂಗಾ ಕ್ಷೇತ್ರದ ವಿಸ್ತರಣವೆನಿಸಿದೆ. ಹಳೆಯ ಊರಿನ ನಿಲುವನ್ನು ಹೊಂದಿದೆ. ತುಮಕೂರು ತಾಲೂಕಿನಲ್ಲಿ ಕ್ರಿ.ಶ. ೧೨೮೭ರ ಮರುಗಲನಾಡಿನ ಹುಲಮನಕುಪ್ಪೆಯ ಬಾಸಿಗೌಡನ ಹೆಸರಿನಲ್ಲಿ ಬಾಸಿಸಮುದ್ರ ಎಂಬ ಕೆರೆ ಇದ್ದು ರಾಯಪುರ ಗ್ರಾಮದ ಶಾಸನೋಕ್ತ ಸಂಗತಿ ಆಗಿದೆ. ಹೀಗೆಯೇ ಮರುಗಲನಾಡಿನ ಹಲಗೋಡಲುವಿನಲ್ಲಿ ಕಾಚಿಗವುಡಿಯ ಹೆಸರಿನಲ್ಲಿ ಕಾಚಿಸಮುದ್ರ ಎಂಬ ಕೆರೆ ಕಟ್ಟಿಸಿದ್ದು ಕ್ರಿ.ಶ. ೧೨೮೭ ರ ಶಾಸನದಲ್ಲಿದೆ. ಇವೆರಡೂ ಶಾಸನಗಳೂ ಹೊಯ್ಸಳ ರಾಮನಾಥನ ಕಾಲದವು, ಹರಳೂರು, ರಾಯಪುರಗಳು ಹಳೆಯ ಮರುಗಲನಾಡಿಗೆ ಸೇರಿದ್ದು ಕೇತಸಮುದ್ರ ಪ್ರದೇಶವೂ ಇವಕ್ಕೆ ಸಮೀಪವಾಗಿದ್ದು ಕ್ರಿ.ಶ. ೧೨೮೭ರ ಸುಮಾರಿನಲ್ಲಿ ಹೊಯ್ಸಳ ರಾಮನಾಥನ ಅಂಕೆಗೆ ಇದ್ದ ಪ್ರದೇಶವಾಗಿತ್ತೆನ್ನಬೇಕು. ಈ ಪ್ರದೇಶದ ಕೆರೆಯ ಹೆಸರುಗಳ ಹಿನ್ನೆಲೆಯಲ್ಲಿ ಕೇತಯ್ಯ ದಂಡನಾಯಕನೂ 'ಕೇತಸಮುದ್ರ'ದ ನಾಯಕನಾಗಿದ್ದು ಅವನು ಬಹುಶಃ ಮೇದಾರ ಕೇತಯ್ಯನ ಹೆಸರಿನಲ್ಲಿಯೆ ಕೇತಸಮುದ್ರ ಕೆರೆಯನ್ನು ಪುನರ್ ನವೀಕರಿಸಿದ ಸೂಚನೆ ದೊರೆಯುತ್ತದೆ. ಸಿದ್ಧಗಂಗಾ ಬೆಟ್ಟ, ರಾಮೇಶ್ವರದೇವರ ಬೆಟ್ಟ, ಇತ್ಯಾದಿಗಳು ಜಲಾನಯನ ಪ್ರದೇಶಕ್ಕೆ ಅನುಕೂಲಿಸಿದ್ದ ಗಿರಿಗಳಾಗಿದ್ದುವು. ದೇವರಾಯಪಟ್ಟಣದ ಕೆರೆ, ಕರಿಕಲ್ಲು ಪಾಳ್ಯದ ಕೆರೆ, ಉದ್ದಾನಸ್ವಾಮಿ ಕಟ್ಟೆಯ ನೆಲೆ ಇವೆಲ್ಲ ಪ್ರಾಚೀನ ಕೆರೆಗಳಾಗಲು ಆ ಗಿರಿಗಳೂ ಕಾರಣವಾಗಿದ್ದವು. ಹೀಗೆ ನೀರಿನಾಸೆ, ಗಿರಿಗಳ ಗವಿಗಳು ಅನೇಕವಿದ್ದು ಪ್ರಾಗೈತಿಹಾಸಿಕ ನೆಲೆಗಳೂ ಆಗಿದ್ದ ಬಗ್ಗೆ ಪುರಾತತ್ವೀಯ ಸಾಕ್ಷ್ಯಗಳೂ ಇವೆ. ವಿಶೇಷತ ಸಿದ್ಧಗಂಗಾ ಬೆಟ್ಟವು ಸೂಕ್ಷ್ಮ ಶಿಲಾಯುಗ, ನೂತನ ಹಾಗು ಬೃಹತ್ ಶಿಲಾಯುಗದ ಪರಿಸರದ್ದಾಗಿ ಕಾಣಬರುತ್ತದೆ. ಅಂದರೆ ಕ್ರಿ.ಪೂ. ೨೦೦೦ ವರ್ಷಗಳ ಹಿಂದಿನ ಪ್ರಾಗಿತಿಹಾಸದ ಸಂಗತಿ ಇದು. ನಮ್ಮ ಇತ್ತೀಚಿನ ಶೋಧದಲ್ಲಿ ಸಿದ್ಧಗಂಗಾ ಬೆಟ್ಟದ ದಕ್ಷಿಣ ಬದಿಗಿರುವ ರಾಮೇಶ್ವರ ಬೆಟ್ಟದ ದೊಡ್ಡಸಿದ್ಧಪ್ಪನ ಗವಿಯ ಒಳಗಿನ ಬಂಡೆ ಮೈಯಲ್ಲಿ ಗವಿವರ್ಣ ಚಿತ್ರಗಳು ಕಂಡುಬಂದಿವೆ. **ಬಿಳಿವರ್ಣದ ನೀಳ ದೋಣಿ** ಆಕಾರದ ಭಾಗದಲ್ಲಿ, **ಗೋವು** (ಹಸು) ಮತ್ತು **ಪಕ್ಷಿಯ** (ನವಿಲು !) ಚಿತ್ರಗಳು ಕಂಡು ಬಂದಿವೆ. ಇವು ಪ್ರಾಗೈತಿಹಾಸಿಕ ಕಾಲದ ವರ್ಣಚಿತ್ರಗಳಾಗಿವೆ. (ವರ್ಣ ಚಿತ್ರಗಳನ್ನು ಖ್ಯಾತ ಪುರಾತತ್ವವಿದ ಶ್ರೀ ಸಿ.ಟಿ.ಎಂ. ಕೊಟ್ರಯ್ಯನವರಿಗೂ ತೋರಿಸಿ, ನಾನು ನಿಗದಿಗೊಳಿಸಿಕೊಂಡಿದ್ದ ಈ ವರ್ಣಚಿತ್ರಗಳ ಕಾಲವನ್ನು ದೃಢೀಕರಿಸಿಕೊಂಡಿದ್ದೇನೆ.) ಜೊತೆಗೆ ಪ್ರಾಗೈತಿಹಾಸಿಕ **ಕಪ್ಪು ವರ್ಣದ ಮತ್ಸ್ಯ** ಚಿತ್ರವು ಬೆಟ್ಟದ ಮೇಲಣ ಗವಿಯೊಂದರಲ್ಲಿ ಇದೆ. ಇಲ್ಲಿ ಇತಿಹಾಸ ಕಾಲದ ವರ್ಣಚಿತ್ರಗಳೂ ಸೇರಿಕೊಂಡಿರುವಂತಿದೆ. ಹೀಗಾಗಿ ಸಿದ್ಧಗಂಗಾ ಬೆಟ್ಟದ ಪಾರ್ಶ್ವ ಪರಿಸರವೂ ಸೂಕ್ಷ್ಮ ಶಿಲಾಯುಗದಿಂದ ಹಿಡಿದು ನೂತನ ಮತ್ತು ಬೃಹತ್ ಶಿಲಾಯುಗದ ಜನರ ವಾಸ್ತವ್ಯವನ್ನು ಹೊಂದಿತ್ತು ಎಂದಾಗುತ್ತದೆ. ಕಾಲಾಂತರದಲ್ಲಿ ಈ ಗವಿಗಳಲ್ಲಿ ಸಿದ್ಧಗಂಗೆಯ ಹಿಂದಿನ ಯತಿಗಳೂ ತಪೋನಿಷ್ಠ ರಾಗಿದ್ದರೆಂಬುದಕ್ಕೆ ಅಲ್ಲಿರುವ ಪ್ರಾಚೀನ ಶಿವಲಿಂಗಗಳೇ ಸಾಕ್ಷಿಯಾಗಿವೆ. ರಾಮಲಿಂಗೇಶ್ವರ ಬೆಟ್ಟದಲ್ಲಿ **ದೊಡ್ಡಸಿದ್ಧಪ್ಪನ** ಗವಿಯು (ಕೆಲವರು ಇದನ್ನೇ **ಚಿಕ್ಕಸಿದ್ಧಪ್ಪನ** ಗುಡಿ ಎನ್ನುತ್ತಾರೆ.) ಬದಿಗೆ ಸುಮಾರು ೨೦೦ ಅಡಿ ಅಂತರದಲ್ಲಿ ಚಿಕ್ಕಸಿದ್ಧಪ್ಪ ಗವಿಯೂ



ಶ್ರೀ ಸಿದ್ಧಗಂಗಾ ಕ್ಷೇತ್ರದ ಬೆಟ್ಟದ ಒಂದು ನೋಟ

(ಕೆಲವರು ಇದನ್ನೇ ದೊಡ್ಡಸಿದ್ಧಪ್ಪನ ಗವಿ ಎನ್ನುತ್ತಾರೆ.) ಇದ್ದು ಎತ್ತರದ ಪಾಣಿವಟ್ಟುವಿನ ಶಿವಲಿಂಗ ಹಾಗೂ ನಂದಿ ಇದೆ; ಗವಿಯ ಒಳಗೆ ಬಹಳ ವಿಶಾಲವಾಗಿದ್ದು ಸುಮಾರು ೨೦೦ ಜನ ಕೂಡುವಷ್ಟು ಸ್ಥಳಾವಕಾಶವಿದೆ. (ಮುಂದೆ ಹೆಚ್ಚಿನ ವಿವರವನ್ನು ನೀಡಿದೆ.)

ಈ ಬೆಟ್ಟಕ್ಕೆ ಅಂಟಿದಂತೆ ಉತ್ತರ ಭಾಗಕ್ಕೆ ಬೃಹತ್ **ಶಿಲಾಪಾದದಾಕಾರದ** ಕಾಲು ಬಂಡೆ ಇದೆ. ಇದನ್ನು ರಾಮೇಶ್ವರ (ರಾಮಲಿಂಗೇಶ್ವರ) ಪಾದವೆನ್ನುವುದುಂಟು. ಬಹುಶಃ ಇದೊಂದು ಪ್ರಾಗೈತಿಹಾಸಿಕ ಕಾಲದ ಕಲ್ಲಾಸರೆ ಬಂಡೆಯಾಗಿ ಬಳಕೆಗೊಳ್ಳುತ್ತಿದ್ದಂತೆ ಕಾಣುತ್ತದೆ. ನೈಸರ್ಗಿಕ **'ಕಾಲುಬಂಡೆ'** ಆಕಾರದ ಶಿಲೆ ಇದಾಗಿದ್ದು ಅಚ್ಚರಿಗೊಳಿಸುತ್ತದೆ. ಸಿದ್ಧಗಂಗಾ ಬೆಟ್ಟದ ಮೇಲೆಯೂ ಹೀಗೆಯೇ ನೈಸರ್ಗಿಕ ಬೃಹತ್ ಕಲ್ಲಾಸರೆ ಬಂಡೆ ಇದ್ದು ಪ್ರಾಗೈತಿಹಾಸಿಕ ನೆಲೆ ಪರಿಸರ ಎಂಬುದಕ್ಕೆ ಸಾಕ್ಷಿ ಆಗಿವೆ.

ಸಿದ್ಧಗಂಗೆಗೆ ಸುಮಾರು ೧೫ ಕಿ.ಮೀ. ದೂರದ ಕಣ್ಣೂರಿನ ಮಠದಲ್ಲಿ ಬೃಹತ್ ಶಿಲಾಯುಗ ಸಮಾಧಿಯೇ ಸ್ವಾಮಿಗಳ ತಪೋಗವಿಯಾಗಿ ಮಾರ್ಪಟ್ಟಿರುವುದಿದೆ. ಪಾದ ಚಿಹ್ನೆಗಳನ್ನು ಮೂಡಿಸಲಾಗಿದೆ. ಇದೇ ರೀತಿ ಸಿದ್ಧಗಂಗಾ ಬೆಟ್ಟದ ಬಲ ಹಿಂಪಾರ್ಶ್ವಕ್ಕೆ ರುದ್ರಮ್ಮ ಗವಿಯವೊಳಗೆ ಅಂಥ ಸಮಾಧಿ ಅವಶೇಷಗಳಿವೆ.

ಆನೆಗೊಂದಿ ಸ್ಥಳದಲ್ಲಿ **ದೋಣಿ** ಆಕಾರದ ಬಂಡೆಯ ಮೇಲೆ ದೋಣಿ ಚಿತ್ರವಿದ್ದು ಮೇಲೆ ಪಕ್ಷಿಯ ಚಿತ್ರವೂ ಇದ್ದು, ಶಿಲಾತಾಮ್ರ - ಬೃಹತ್ ಶಿಲಾಯುಗಕ್ಕೆ ಸೇರಿದ್ದೆಂದು ಡಾ. ಅ. ಸುಂದರ ಅವರು ತೋರಿದ್ದಾರೆ. ಮಸಕು ಬಿಳಿಯ ದ್ವಿವರ್ಣ ಚಿತ್ರಗಳು, ಬಾದಾಮಿ ಗವಿಗಳಲ್ಲಿ ಮಧ್ಯಯುಗೀಣ ಸಣ್ಣದಂಥ ಬಿಳಿಯ ಬಣ್ಣದ ಚಿತ್ರಗಳು ಬ್ರಹ್ಮಗಿರಿ ಮತ್ತು ಚಿತ್ರದುರ್ಗದ ಗವಿಗಳಲ್ಲಿವೆ ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರ ಪರಿಸರದ ಇಳಕಲ್ಲು ರಾಮೇಶ್ವರ ಬೆಟ್ಟದ ಸದ್ಯದ ದೋಣಿ ಹಾಗೂ ಅದರೊಳಗಿನ ಚಿತ್ರಗಳನ್ನು ಗಮನಿಸಿದರೆ ಇತಿಹಾಸ ಕಾಲದ ಮುನ್ನಿನವೆಂದೇ ತೋರುತ್ತವೆ.

**ಇತಿಹಾಸ ಸಿದ್ಧಗಂಗೆ**

ಸಿದ್ಧಗಂಗಾ ಪ್ರದೇಶ ಕೇತಸಮುದ್ರದ ಒಂದು ಪ್ರಾಚೀನ ನೆಲೆಯಾಗಿ, ಪ್ರಸಿದ್ಧಿಗೊಂಡಿತ್ತು. ಸಿದ್ಧಗಂಗಾ ಕ್ಷೇತ್ರ ಪ್ರದೇಶವು ತಪಸ್ವಿಗಳು ಹಾಗೂ ವಿರತ ಶರಣರನ್ನು ಐತಿಹಾಸಿಕವಾಗಿ ೧೪ನೇ ಶತಮಾನದಲ್ಲಿಯೂ ಪ್ರಸಿದ್ಧಿ ಪಡೆದು ಆಕರ್ಷಿಸಿರಬೇಕು. ಗೋಸಲ ಸಿದ್ಧೇಶ್ವರರು ಈ ದ್ವಯ ಗಿರಿಗಳ ಮಹತ್ವ ಕಂಡು ಇಲ್ಲಿ ದೀರ್ಘಕಾಲ ಇಲ್ಲಿ ನೆಲೆಸಿದರೆನ್ನಬೇಕು. ಅಜ್ಞಾತ ಗವಿಮುನಿಗಳ ಕ್ಷೇತ್ರವು ಗೋಸಲರಿಂದಾಗಿ ಪ್ರಸಿದ್ಧಿಯು ಮುಂದುವರಿಯಿತೆನ್ನಬೇಕು. ಗೋಸಲ ಸಿದ್ಧೇಶ್ವರ ಕಾಲ ಕ್ರಿ.ಶ. ೧೫೦೦ ರಿಂದ ೧೫೫೦ ಎನ್ನುವುದು ಚನ್ನಪ್ಪ ಎರೆಸೀಮೆ ಅವರ ಮಾತು. ಇದಕ್ಕೆ ಪೋಷಕವಾಗಿ ಸಾಹಿತ್ಯ ಶಾಸನ ಸಾಕ್ಷ್ಯಗಳೂ ಕಾಣಬರುತ್ತವೆ.

ಕೇತಸಮುದ್ರದಲ್ಲಿ ಚಿಕ್ಕಣ್ಣ ಸೆಟ್ಟಿ ಎಂಬ ವೀರಶೈವ ಶರಣ ದಾಸೋಹ ಸೇವೆಯಿಂದ ಬಹಳ ಪ್ರಸಿದ್ಧಿಗೊಂಡಿದ್ದ. ದಾಸೋಹ ಕ್ರಿಯೆ, ಸಿದ್ಧಗಂಗಾ ಪರಿಸರದಲ್ಲಿ ಪ್ರಾಚೀನದಿಂದಲೂ ನಿರಂತರ ನಡೆದು ಬಂದಿದೆ ಎಂಬುದಕ್ಕೆ ಈತನೂ ಒಬ್ಬ ಸಾಕ್ಷಿ ಆಗಬಹುದು. ಇವನು ಕೇತಸಮುದ್ರದ ನಿವಾಸಿ ಎಂದರೆ ಇವನೂ ಹೊಯ್ಸಳ ರಾಮನಾಥನ ಕಾಲದವನಿರಬಹುದು (೧೩ನೇ ಶತಮಾನದ ಕೊನೆ). ಇವನು ಪಾಲ್ಕುರಿಕೆ ಸೋಮನಾಥ ಕಲ್ಲೆಹದ ೭ ಳ ಶೀಲಗಳ ಚನ್ನಮ್ಮನ ದರ್ಶನಕ್ಕೆ ಬಂದಂತೆ. ಚಿಕ್ಕಣ್ಣ ಸೆಟ್ಟಿಯ ದಾಸೋಹ ಸೇವೆ ತಿಳಿದು ಕಲ್ಯಾಣ ಕ್ರಾಂತಿಯ ನಂತರ ಚರಪತಿಗಳೊಡನೆ ಕೂಡಿ ಚಿಕ್ಕಸಿದ್ಧೇಶ್ವರರು ಶಿವಗಂಗೆಗೆ ಬಂದು ಹೊನ್ನಾದೇವಿಯಿಂದ ಕಂಕಣ ಪಡೆದ ಕಾಲದಲ್ಲಿಯೇ ಈ ಚಿಕ್ಕಣ್ಣಶೆಟ್ಟಿ ಇದ್ದಿರಲು ಸಾಕು. ವಿರೂಪಾಕ್ಷ ಪಂಡಿತನ ಕ್ರಿಶ. ೧೫೮೫ರ 'ಚನ್ನಬಸವ ಪುರಾಣ (೭-೪೩)ವೂ ಇದಕ್ಕೆ ಸಾಕ್ಷಿ ಆಗಿದೆ. ಹೀಗಾಗಿ ಚಿಕ್ಕ ಸಿದ್ಧೇಶ್ವರ ಹೆಸರಿನ ಪ್ರಭಾವದಿಂದಾಗಿ 'ಚಿಕ್ಕಣ್ಣಶೆಟ್ಟಿ' ಗೂ ಹೆಸರು ಬಂದಿದ್ದರೆ ೧೩ನೇ ಶತಮಾನದಲ್ಲಿ ಅವನು ಕೇತಸಮುದ್ರದಲ್ಲಿ ಇದ್ದಿರುವ ಸಾಧ್ಯತೆ ಆಗುತ್ತದೆ. ಜನಪದರೇನೋ ಮೇದಾರ ಕೇತಯ್ಯನಿಂದಾಗಿಯೋ ಏನೋ ಸ್ಮರಣೆ ಮಾಡಿ ಕ್ಯಾತನಾಯಕನ ಹೆಸರಿಗೆ (ವ್ಯಕ್ತಿನಾಮ ನಿಷ್ಪತ್ತಿಯಾಗಿ) ಕ್ಯಾತಂದ್ರದ ಹೆಸರನ್ನು ರೂಢಿ ಮಾಡಿಕೊಂಡಿರುವಂತಿದೆ.

ಕ್ಯಾತಸಂದ್ರ-ಹರಳೂರು ಹಾದಿಯಲ್ಲಿ 'ಕೌತಮಾರನಹಳ್ಳಿ' ಎಂಬ ಊರು ಇದ್ದು ಪರ್ಯಾಯ ನಾಮವಾಗಿ 'ಗೌತಮಾರನಹಳ್ಳಿ' ಎಂಬ ಹೆಸರೇ ಇದೆ. ಕೇತೋಹಳ್ಳಿ ಎಂಬ ಗ್ರಾಮವೂ ಇದೆ. ಇವಾವೂದೂ ಕೇತಸಮುದ್ರ ಎಂಬ ಸ್ಥಳ ನಾಮಕ್ಕೆ ಹೊಂದಿಕೆ ಆಗದು.

*(ಮುಂದುವರೆಯುತ್ತದೆ)*







ಶ್ರೀ ಸಿದ್ಧಗಂಗಾ ಬೆಟ್ಟದ ಒಂದು ವಿಹಂಗಮ ನೋಟ



# ಸಾಮಾಜಿಕ ಪರಿವರ್ತನೆಗೆ ಶರಣರು ಕಲ್ಪಿಸಿದ ಪರಿಹಾರಗಳು

- ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ *

ಹನ್ನೆರಡನೆಯ ಶತಮಾನ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಮಹತ್ವಶಾಲಿಯಾದುದು. ಅದಕ್ಕೆ ಕಾರಣ ಅಂದು ಒಂದು ಸಮಾನ ಧ್ಯೇಯವುಳ್ಳ ಸಮುದಾಯವೊಂದು ಮಹತ್ತರವಾದ ಅನ್ವೇಷಣೆಗೆ ತೊಡಗಿದ್ದು. ಹಾಗೆ ಅನ್ವೇಷಣೆಗೆ ತೊಡಗಿದವರು ಶರಣರು. ಶರಣರು ಎಂದರೆ ಲಿಂಗಾಯಿತರು ಅಥವಾ ವೀರಶೈವ ಅಥವಾ ಯಾವುದೊ ಒಂದು ಪಂಥದವರು ಎಂದರ್ಥವಲ್ಲ. ವಚನಕಾರರೇ ಗ್ರಹಿಸಿರುವಂತೆ ಶರಣರು ಅಂದರೆ ಅರಿವುಳ್ಳವರು; ಅರಿವನ್ನು ಸಮಾಜಮುಖಿಯಾದ ಬೆಳಕಾಗಿ ಮಾಡಹೊರಟವರು. ಇದನ್ನೆ ಬಸವಣ್ಣ 'ಅರಿದರೆ ಶರಣ' ಎಂದು ಸೂಚಿಸಿದ್ದು.

ಈ ಶರಣರು ಬೋಧಿಸುವುದಕ್ಕೆ ಬಂದವರಲ್ಲ; ಉದಾತ್ತವಾದ ಬದುಕ ಬಯಸಿದವರು. ಯಾವ ನೆಲದ ಮೇಲೆ ನಿಂತಿದ್ದರೋ ಆ ನೆಲದ ಮಹತ್ವವನ್ನು ಅರ್ಥಮಾಡಿಕೊಂಡವರು. ಅವರಿಗೆ ತತ್ವದಲ್ಲಿ ಮುಖ್ಯವಾಗಿದ್ದದ್ದು ಬದುಕು. ಈ ಮರ್ತ್ಯದ ಬದುಕು ಮಹತ್ವದ್ದಾಗಬೇಕು, ಅರ್ಥಪೂರ್ಣವಾಗಬೇಕು ಎಂಬ ಸಂಕಲ್ಪದಿಂದ ಪ್ರಚೋದಿತರಾದವರು.

ಈ ಶರಣರು ಮೊದಲು ತಾವು ತಮ್ಮ ಬದುಕನ್ನು ಆಚಾರದ ಅಸ್ತಿವಾರದ ಮೇಲೆ ನಿಲ್ಲಿಸಿಕೊಂಡರು, ಮುಕ್ತವಾದ ಮನಸ್ಸಿನಿಂದ ಈ ನೆಲದ ಬದುಕಿನ ಅರ್ಥಪೂರ್ಣತೆಯನ್ನು ಅರಿತುಕೊಳ್ಳತೊಡಗಿದರು. ಬದುಕಿಗೆ ಮಾರಕವಾಗಿದ್ದ ಡಂಭಾಚಾರಗಳನ್ನು ಅವರು ಗುರುತಿಸಿದರು; ಆಷಾಢಭೂತಿ ತನದ ಆತಂಕ-ಅಪಾಯಗಳನ್ನು ಗ್ರಹಿಸಿದರು. ಎಲ್ಲಕ್ಕಿಂತ ಮಿಗಿಲಾಗಿ ಸ್ವಾರ್ಥ ಚೋದಿತನಾದ ವ್ಯಕ್ತಿ, ಈ ನೆಲದ ಬದುಕನ್ನು ಜಾತಿಮತ-ಸಿರಿವಂತಿಕೆ-ಬಡತನ-ಅಸ್ಪೃಶ್ಯತೆ ಎಂಬ ಅಪಾಯಕಾರಿ ಗಂಡಾಂತರಗಳಿಂದ ಭಯಾನಕಗೊಳಿಸಿರುವುದನ್ನು ಕಂಡರು. ಆಗ ತಾವು ಶರಣರಾಗಿ ಬದುಕುವುದಷ್ಟೇ ಮುಖ್ಯ ಅಲ್ಲ; ಬೇರೆಯವರೂ ಶರಣರಾಗಿ ಬದುಕಲಿ ಎನ್ನಿಸಿತು.

ನಮ್ಮ ಪುಣ್ಯ -ಈ ಶರಣರು ಧರ್ಮ ಮತ್ತು ಸಾಹಿತ್ಯಗಳ ಶ್ರೀಮಂತ ಪರಂಪರೆಯನ್ನು ಪಡೆದವರಾಗಿದ್ದರು. ಶ್ರೀಮಂತ ಹೃದಯವನ್ನು ಪಡೆದಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ಕ್ರಾಂತಿಕಾರಿಗಳಾಗಿದ್ದರು; ದೂರದರ್ಶಿತ್ವವುಳ್ಳ ಪ್ರವಾದಿತ್ವ ಪಡೆದವರಾಗಿದ್ದರು. ಆದ್ದರಿಂದ ಶರಣರು ಮೊದಲನೆಯದಾಗಿ ಹಾಗೂ ಪ್ರಮುಖವಾಗಿ ಕಂಡುಕೊಂಡದ್ದು - ಜ್ಞಾನ ಎಲ್ಲರಿಗೂ ಲಭ್ಯವಾಗಬೇಕೆಂಬ ಪ್ರಾಥಮಿಕ ಅಗತ್ಯವನ್ನು. ಇಲ್ಲಿಯವರೆಗೂ ಜ್ಞಾನ ಒಂದು ರಹಸ್ಯ ವಿದ್ಯೆಯಾಗಿತ್ತು. ಗುರು ಇಷ್ಟಪಟ್ಟು ಕೊಟ್ಟರೆ ಉಂಟು ಇಲ್ಲದಿದ್ದರೆ ಇಲ್ಲ ಎನ್ನುವಂತಾಗಿತ್ತು. ಮೊದಲು ಶರಣರು ಈ ಅಪಾಯಕಾರಿ ಅಡಚಣೆಯನ್ನು ದೂರಮಾಡಿದರು.

ಜ್ಞಾನ ಎಲ್ಲರ ಹಕ್ಕು ಎಂದು ಸಾರಿದುದೇ ಅಲ್ಲದೆ 'ತನ್ನರಿವೆ ತನಗೆ ಗುರು' ಎಂದು ಕ್ರಾಂತಿಕಾರಕ ದೃಷ್ಟಿಯನ್ನು ನೀಡಿದರು. ಜ್ಞಾನ ಎನ್ನುವುದು ಜನರಿಗೆ ಅರಿಯದ ಭಾಷೆಯಲ್ಲಿ ಇರಬೇಕೆ? ಖಂಡಿತ ಹಾಗಾಗಬಾರದು ಎನಿಸಿತು ಶರಣರಿಗೆ. ಶರಣರು ಮಾಡಿದ ಮೊದಲ ಸಾಧನೆ ಜನರು ಆಡುವ ಭಾಷೆಯಲ್ಲಿ ಜ್ಞಾನವನ್ನು ಬೋಧಿಸಿದುದು. ವಾಸ್ತವವಾಗಿ ಈ ಸಂಗತಿಯನ್ನು, ಬಸವನಾಳರು ದೇವವಾಣಿ ಜನವಾಣಿಯಾಗಲು ನಿರಾಕರಿಸಿದಾಗ, ಜನವಾಣಿಯನ್ನೇ ದೇವವಾಣಿಯಾಗಿಸಿದರು ಎಂಬರ್ಥದಲ್ಲಿ ವಿವರಿಸಿದರು.

ಜ್ಞಾನ ಮನೆಯ ಬಾಗಿಲಿಗೆ ಬರಬೇಕು; ಮನಸ್ಸಿನ ಬಾಗಿಲನ್ನು ತೆರೆಯಬೇಕು. ಜ್ಞಾನದ ಕೆಲಸ ಅಹಂಕಾರ ಬೆಳಸುವುದಲ್ಲ; ಅಹಂಕಾರ ನಾಶಮಾಡುವುದು; ಲೋಕಕ್ಕೂ ತನಗೂ ಇರುವ ಸಂಬಂಧವನ್ನು ಅರ್ಥಮಾಡಿಕೊಳ್ಳುವ ಶಕ್ತಿಯನ್ನು ನೀಡುವುದು. ಅಷ್ಟೇ ಅಲ್ಲ ವ್ಯಕ್ತಿ, ಸಮಾಜ, ದೇವರು ಮತ್ತು ತನ್ನ ಸಂಬಂಧಗಳನ್ನು ಕ್ಷೋಭೆಗೊಳ್ಳದಂತೆ ಕಾಪಾಡಿಕೊಳ್ಳುವುದು.

ಶರಣರು ಮಾಡಿದ ಪ್ರಥಮ ಕಾರ್ಯ ಜನರು ಆಡುವ ಭಾಷೆಯಲ್ಲಿ ವ್ಯವಹರಿಸಿ ಜ್ಞಾನದ ಬಾಗಿಲುಗಳನ್ನು ತೆರೆದುದೇ ಅಲ್ಲದೆ ಜ್ಞಾನದ ಬಗೆಗಿದ್ದ ಭ್ರಮೆಗಳನ್ನೆಲ್ಲ ದೂರಮಾಡಿ ಅದು ಎಲ್ಲರ ಕೈಗೂ ಎಟಕುವಂಥದ್ದು ಎಂಬುದನ್ನು ಸೂಚಿಸಿದುದು. ಶರಣರು ಮುಕ್ತದೃಷ್ಟಿಯವರಾಗಿದ್ದರು. ಆದ್ದರಿಂದಲೆ ಅವರು ಬೋಧಿಸುವುದಕ್ಕಿಂತ ಮುಖ್ಯವಾದ

* ೨೦೩, 'ಲಲಿತಕೃಪ', ೭ನೇ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು-೫೬೦೧೦೪





ಚಿಂತನಪರ ಮಾರ್ಗವನ್ನು ಅವಲಂಬಿಸಿದರು. ಜೇಡರ ದಾಸಿಮಯ್ಯ ಇಂಥ ಕ್ರಮವನ್ನು 'ಸೂಳ್ನುಡಿಗಳು' ಎಂದು ತುಂಬ ಮಾರ್ಮಿಕವಾಗಿ ಸೂಚಿಸಿದನು. ಅಷ್ಟೇ ಅಲ್ಲ, ಕಡೆಗೀಲು ಬಂಡಿಗಾಧಾರ ಆಗುವ ಹಾಗೆ, ಶರಣರ ನುಡಿಗಡಣ ಒಡಲೆಂಬ ಬಂಡಿಗೆ ಕಡೆಗೀಲು ಎಂದು ಗೂಢವಾಗಿ ಸೂಚಿಸಿದನು. ನಾವು ಬಳಸುವ ಗಾಡಿ ಎಷ್ಟೇ ಬಲಿಷ್ಠವಾಗಿರಲಿ; ಅದನ್ನು ಎಳೆಯುವ ಹೋರಿಗಳು ಎಷ್ಟೇ ಸಮರ್ಥವಾಗಿರಲಿ; ಆ ಗಾಡಿ ಸುರಕ್ಷಿತವಾಗಿ ಚಲಿಸಬೇಕಾದರೆ ಆ ಗಾಡಿಯ ಚಕ್ರಗಳಿಗೆ ಕಡೆಗೀಲುಗಳು ಬೇಕೇಬೇಕು. ಒಂದು ಪಕ್ಷ ಕಡೆಗೀಲನ್ನು ತೆಗೆದೆವೆಂದಿಟ್ಟುಕೊಳ್ಳಿ ಆ ಗಾಡಿ ಸುರಕ್ಷಿತವಲ್ಲವೇ ಅಲ್ಲ; ಚಲಿಸುತ್ತಿದ್ದಂತೆ ಚಕ್ರ ಅಥವಾ ಚಕ್ರಗಳು ಕಳಚಿಕೊಂಡು ಅದು ಬಿದ್ದು ಹೋಗುತ್ತದೆ. ಗಾಡಿಗೆ ಕಡೆಗೀಲು ಅಗತ್ಯವಿದ್ದ ಹಾಗೆ ಮನುಷ್ಯನಲ್ಲಿರುವ ಪಂಚೇಂದ್ರಿಯಗಳನ್ನು ಅವನ್ನಾಡಿಸುವ ಅರಿಷಡ್ವರ್ಗಗಳನ್ನು ಹತೋಟಿಯಲ್ಲಿ ಇರಿಸುವ ಕಡಾಣಿ / ಕಡೆಗೀಲು ಶರಣರ ನುಡಿಗಡಣ ಎಂದು ತುಂಬ ಅರ್ಥಪೂರ್ಣವಾಗಿ ವಿವರಿಸಿದ್ದಾನೆ.

ಈ ಶರಣರ ಮಾತುಗಳನ್ನು ಸೂಳ್ನುಡಿಗಳು ಅಂದರೆ ಶರಣರು ತಮ್ಮ ಅನುಭವದಿಂದ ಕೂಡಿದ ಚರ್ಚೆಯ ಮಾತುಗಳು- ಸಂಭಾಷಣೆಯ ಮಾತುಗಳು ಎಂದು ಈ ಸೂಳ್ನುಡಿಗಳಿಗೆ ಇನ್ನಷ್ಟು ಅರ್ಥವನ್ನು ತುಂಬುತ್ತಾನೆ. ಶರಣರು, ಹೇಳಿದ್ದನ್ನು ಕೇಳಿಕೊಂಡು ಹೋಗುವ ಹೌದಪ್ಪಗಳಲ್ಲ; ಸರಿ ತಪ್ಪುಗಳನ್ನು ಅರಿತು ಚರ್ಚಿಸುವವರು ಎಂದು ಆತ ಸೂಚಿಸುತ್ತಾನೆ. ಶರಣರು ಅಷ್ಟಾವರಣಗಳ ಬಗ್ಗೆ, ಪಂಚಾಚಾರಗಳ ಬಗ್ಗೆ ವಿವರಣೆ ನೀಡುವಂತೆಯೇ ಚರ್ಚಿಸುತ್ತ ಹೋಗುತ್ತಾರೆ. ಷಟ್ಸ್ಥಲಗಳ ಬಗೆಗೂ ಅವರ ಚರ್ಚೆ ನಿಷ್ಠುರವಾಗಿ ನಡೆಯುತ್ತದೆ. ಉದಾಹರಣೆಗೆ-

**ಮೆಲ್ಲ ಮೆಲ್ಲನೆ ಭಕ್ತನೆನಿಸಿಕೊಂಬೆ,**
**ಮೆಲ್ಲ ಮೆಲ್ಲನೆ ಮಾಹೇಶ್ವರನೆನಿಸಿಕೊಂಬೆ,**
**ಮೆಲ್ಲ ಮೆಲ್ಲನೆ ಪ್ರಸಾದಿ ಎನಿಸಿಕೊಂಬೆ,**
**ಮೆಲ್ಲ ಮೆಲ್ಲನೆ ಪ್ರಾಣಲಿಂಗಿ ಎನಿಸಿಕೊಂಬೆ,**
**ಮೆಲ್ಲ ಮೆಲ್ಲನೆ ಶರಣನೆನಿಸಿಕೊಂಬೆ**
**ಮೆಲ್ಲ ಮೆಲ್ಲನೆ ಐಕ್ಯನೆನಿಸಿಕೊಂಬೆ**
**ಮೆಲ್ಲ ಮೆಲ್ಲನೆ ಷಟ್‌ಸ್ಥಲವ ಮೀರಿ**
**ನಿರವಯಸ್ಥಲವನೆಯ್ದುವೆನಯ್ಯಾ**
**ಕೂಡಲಸಂಗಮದೇವಾ.**

ಎನಗಿಂತ ಕಿರಿಯರಿಲ್ಲ ಎನ್ನುವ ಬಸವಣ್ಣನವರ ವ್ಯಕ್ತಿತ್ವದ ನಮ್ರತೆ ಹಾಗೂ ವಿನಯಗಳಿಗೆ ಉಚಿತವಾದದ್ದಾಗಿದೆ ಮೇಲಿನ ವಚನ. ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬುವು ಆರು ಸ್ಥಲಗಳು. ಇವು ಆತ್ಮದ ಆರೋಹಣದ ಮೆಟ್ಟಿಲುಗಳು -ಅಂಗ ಲಿಂಗವಾಗುವ ಹಾದಿ; ಜೀವ-ದೇವನಾಗುವ ಪ್ರಕ್ರಿಯೆ. ಇದನ್ನು ಬಸವಣ್ಣ ಹೇಳುವ ರೀತಿಯಲ್ಲಿರುವ ವಿನಯವನ್ನು ಗಮನಿಸಬೇಕು. ಬಸವಣ್ಣ ಯಾರಿಗೂ ತಿಳಿಯದಂತೆ ನಿಧಾನವಾಗಿ ಒಂದೊಂದೇ ಸ್ಥಲವನ್ನು ನಾನು ಏರಿ ನಿರವಯಸ್ಥಿತಿಗೇರುತ್ತೇನೆ ಎಂದಿದ್ದಾನೆ.

ಭಕ್ತನಾದವನು ದೇವನಾಗಬೇಕಾದರೆ ಆ ಆರು ಸ್ಥಲಗಳೆಂಬ ಮೆಟ್ಟಿಲುಗಳನ್ನು ಏರಲೇಬೇಕು ಎಂಬ ಕಡ್ಡಾಯವಾದ ನಿಯಮ ಇಲ್ಲ. ಸಾಮಾನ್ಯನಾದವನು ಒಂದೊಂದು ಮೆಟ್ಟಿಲನ್ನು ನಿಧಾನವಾಗಿ ಏರಿ ಮೇಲೆ ಹೋಗಬೇಕು. ಬಲಿಷ್ಠನಾದವನು? ಎರಡು-ಮೂರು ಮೆಟ್ಟಿಲುಗಳನ್ನು ಜಿಗಿಯಲಾಗುವುದಿಲ್ಲವೇನು? ಇದು ಒಂದು ಸಾಧನೆಯ ಹಾದಿಯಾದರೆ, ಶರಣರು ಈ ಸಾಧನೆಯ ಹಾದಿ ಇಂಥದ್ದೇ ಎಂದು ಪಟ್ಟು ಹಿಡಿದು ಕೂಡಬೇಡಿ ಎನ್ನುತ್ತಾರೆ. ಉದಾಹರಣೆಗೆ ಸಿದ್ಧರಾಮಣ್ಣನವರ ಈ ವಚನದ ಭಾಗವನ್ನೇ ಗಮನಿಸಿ:

**ಸ್ಥಲವಿಡಿದಾಚರಿಸಬೇಕೆಂಬ ಭಾಷೆ ಬಾಲಭಾಷೆ.**
**ಭಕ್ತನಾಗಿ ಭಕ್ತಸ್ಥಲವಾಚರಿಸುವುದು ಯೋಗ್ಯವಯ್ಯಾ.**
**ಭಕ್ತನಾಗಿ, ಮಹೇಶ್ವರಸ್ಥಲ ಅಳವಡಬಾರದೇನಯ್ಯಾ?**
**ಭಕ್ತನಾಗಿ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯಸ್ಥಲ**
**ಅಳವಡಬಾರದೇನಯ್ಯಾ?**

ಇಲ್ಲಿಯ ಷಟ್ಸ್ಥಲಾನುಭವ ರೋಚಕವಾದದ್ದು; ಕ್ರಾಂತಿಕಾರಕವಾದದ್ದು; ಧಾರ್ಮಿಕ ಲೋಕದ ಒಂದು ವಿಸ್ಮಯಕರ ಕ್ರಾಂತಿ ಇದು.

ಭಕ್ತನಾದ ಮೇಲೆ ಮಹೇಶ್ವರ, ಮಹೇಶ್ವರನಾದ ಮೇಲೆ ಪ್ರಸಾದಿ, ಪ್ರಸಾದಿಯಾದ ಮೇಲೆ ಪ್ರಾಣಲಿಂಗಿ, ಪ್ರಾಣಲಿಂಗಿ ಆದ ಮೇಲೆ ಶರಣ, ಶರಣನಾದ ಮೇಲೆ ಐಕ್ಯ -ಹೀಗೆ ಇವುಗಳನ್ನು ವಿಂಗಡಿಸುವುದು ಅನುಭವಲೋಕದಲ್ಲಿ ಸಾಧ್ಯವೆ?

ರಾಮಕೃಷ್ಣರಂಥ ಭಕ್ತರು ಭಕ್ತಸ್ಥಲದಿಂದ ನೇರ ಐಕ್ಯಸ್ಥಲವನ್ನು ಮುಟ್ಟಬಲ್ಲ ಆಧ್ಯಾತ್ಮ ಸಿದ್ಧಿ ಪಡೆದ ಅನುಭಾವಿಗಳು. ಅವರು ಸಾಧಿಸಿದ ನೆಲೆ ಮೇಲುನೋಟಕ್ಕೆ ಭಕ್ತನಂತೆ ಕಾಣಿಸಿದರೂ, ಅವರ ನಿಜವಾದ ನೆಲೆ ಐಕ್ಯಸ್ಥಲವೇ. ಬಸವ, ಸಿದ್ಧರಾಮ, ಚನ್ನಬಸವ, ಅಲ್ಲಮ -ಇವರೆಲ್ಲರ ಬದುಕು ಅಂಥ ಮಟ್ಟದ್ದು.

ಹರಿಯುವ ನೀರಿನಲ್ಲಿ ಗೆರೆಯೆಳೆದು ವಿಭಾಗಿಸುವುದು ಸಾಧ್ಯವೆ? ಹಾಗೆಯೇ ಅನುಭಾವದ ಲೋಕದಲ್ಲಿ ಅಡ್ಡಡ್ಡ

ಅಥವಾ ಉದ್ದುದ್ದನೆಯ ಗೆರೆಗಳನ್ನು ಎಳೆದು ಇದು ಭಕ್ತನ ಮಟ್ಟ; ಇದು ಮಹೇಶ್ವರನ ಮಟ್ಟ; ಇದು ಪ್ರಸಾದಿಯ ಮಟ್ಟ; ಇದು ಪ್ರಾಣಲಿಂಗಿಯ ಮಟ್ಟ; ಇದು ಶರಣನ ಮಟ್ಟ; ಇದು ಐಕ್ಯನ ಮಟ್ಟ ಎಂದು ವಿಂಗಡಿಸಲು ಸಾಧ್ಯವೇನು?

ಅಂತೆಯೇ ಈ ಷಟ್ಸ್ಥಲಗಳನ್ನು ಆರು ಮೆಟ್ಟಿಲುಗಳು ಎಂದು ವಿಂಗಡಿಸ ಹೊರಡುವ ವಿಶ್ಲೇಷಣೆಯ ವಿಚಿಕಿತ್ಸಕ ಬುದ್ಧಿಯನ್ನು ಅಂಬಿಗರ ಚೌಡಯ್ಯ 'ಷಟ್‌ಸ್ಥಲಂಗಳ ನೋಡಿ ಕಂಡೆಹೆನೆಂದಡೆ ಅಡಕಿಲ ಮಡಕೆಯಂತಲ್ಲ' ಎಂದು ವ್ಯಂಗ್ಯವಾಡುತ್ತಾನೆ. ಈ ಷಟ್ಸ್ಥಲಗಳು ಮಡಕೆಯ ಮೇಲೆ ಮಡಕೆಯನ್ನು ಪೇರಿಸಿದ ಆರು ಮಡಕೆಗಳ ಸಾಲಲ್ಲ. ಸಾಧಕ ತನ್ನ ಸಿದ್ಧಿಯ ಮಟ್ಟವನ್ನು ಗುರುತಿಸಿಕೊಳ್ಳಲು ಆರಂಭ ಕಾಲದಲ್ಲಿ ನೆರವಾಗುವ ಮಾನಸಿಕ ಹಿನ್ನೆಲೆ ಅಷ್ಟೆ. ಇದನ್ನು ಇನ್ನಷ್ಟು ಸ್ಪಷ್ಟಪಡಿಸಿದ, ಷಟ್ಸ್ಥಲಬ್ರಹ್ಮಿ ಚನ್ನಬಸವಣ್ಣನ ಈ ವಚನವನ್ನು ಗಮನಿಸಿ:

**ಮೆಲ್ಲಮೆಲ್ಲನೆ ಭಕ್ತ, ಮೆಲ್ಲಮೆಲ್ಲನೆ ಮಾಹೇಶ್ವರ,**
**ಮೆಲ್ಲಮೆಲ್ಲನೆ ಪ್ರಸಾದಿ, ಮೆಲ್ಲಮೆಲ್ಲನೆ ಪ್ರಾಣಲಿಂಗಿ**
**ಮೆಲ್ಲಮೆಲ್ಲನೆ ಶರಣ, ಮೆಲ್ಲಮೆಲ್ಲನೆ ಐಕ್ಯರಾದೆವೆಂಬರು**
**ನಿಮ್ಮ ಶರಣರು ತಾವೇನು ಮರುಜವಣಿಯ ಕೊಂಡರೆ?**
**ಅಮೃತ ಸೇವನೆಯ ಮಾಡಿದರೆ?**
**ಆವ ಸ್ಥಲದಲ್ಲಿ ನಿಂದಡೂ**
**ಆ ಸ್ಥಲದಲ್ಲಿ ಷಡುಸ್ಥಲ ಅಳವಡದಿದ್ದರೆ,**
**ಆ ಭಕ್ತಿಯ ಬಾಯಲ್ಲಿ ಹುಡಿಯ ಹೊಯ್ದು ಹೋಗುವೆನೆಂದ**
**ಕೂಡಲಚೆನ್ನಸಂಗಮದೇವ.**

ಮೇಲುನೋಟಕ್ಕೆ ಬಸವಣ್ಣನ ಅನುಭಾವ ವಚನದ ಟೀಕೆ ಮಾಡುತ್ತಿರುವಂತೆ ತೋರಿದರೂ, ಇದು ಟೀಕೆ ಅಥವಾ ಕುಹಕ ವ್ಯಂಗ್ಯವಲ್ಲ. ಇದು ಷಟ್ಸ್ಥಲಾನುಭವಸಾರವನ್ನು ಕುರಿತ ಒಂದು ವಾಗ್ವಾದ. ಬಸವಣ್ಣನು ಸೂಚಿಸುವ ಷಟ್ಸ್ಥಲ ಸಿದ್ಧಿಯಲ್ಲೂ ಎಲ್ಲ ಸ್ಥಲಗಳನ್ನೂ ಮೀರಿದ ನಿರವಯಸ್ಥಲದ ಶಿಖರವಿದೆ. ಅದನ್ನು ಚನ್ನಬಸವಣ್ಣ ಇನ್ನಷ್ಟು ವಿಶ್ಲೇಷಿಸಿ ಖಚಿತತೆ ನೀಡುವ ಯತ್ನ ಮಾಡಿದ್ದಾನೆ; ಸಿದ್ಧರಾಮ ಮತ್ತಷ್ಟು ಆ ಭಾವ ಸ್ಫುಟಗೊಳ್ಳುವಂತೆ ಮಾಡಿದ್ದಾನೆ. ಅದನ್ನೇ ಅಂಬಿಗರ ಚೌಡಯ್ಯ ವ್ಯಂಗ್ಯವೆಂಬಂತೆ, ತನಗೆ ಸಹಜವಾದ ರೀತಿಯಲ್ಲಿ ವಿಶದಪಡಿಸಿದ್ದಾನೆ.

ಈ ಚರ್ಚೆ–ಶರಣರಲ್ಲಿ ಜೀವಂತವಾಗಿದ್ದುದರ ಕಾರಣವಾಗಿಯೇ ಜೇಡರ ದಾಸಿಮಯ್ಯ ಶರಣರ ವಚನಗಳನ್ನು 'ಸೂಳ್ನುಡಿ'ಗಳೆಂದು ಅರ್ಥಪೂರ್ಣವಾಗಿ ಕರೆದದ್ದು. ಆ ಕಾರಣವಾಗಿಯೇ ಅವನು ಹೇಳಿದ –

**ಕರಿಯನಿತ್ತಡೆ ಒಲ್ಲೆ**
**ಸಿರಿಯನಿತ್ತಡೆ ಒಲ್ಲೆ**
**ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ**
**ನಿಮ್ಮ ಶರಣರ ಸೂಳ್ನುಡಿಯನೊಂದರಗಳಿಗೆ ಇತ್ತಡೆ**
**ನಿಮ್ಮನಿತ್ತೆ ಕಾಣಾ ರಾಮನಾಥ.**

ಎಂದು ಶಿವನನ್ನೆ ಸೂಳ್ನುಡಿಗೆ–ಅದೂ ಶರಣರ ಸೂಳ್ನುಡಿಗೆ ಮಾರುವ ನಿಷ್ಠುರ ಸೆಟ್ಟಿ ಆತ.

ಶರಣರ ಈ ಚರ್ಚೆ ಕೇವಲ ಷಟ್‌ಸ್ಥಲಕ್ಕೆ ಮೀಸಲಾಗಿಲ್ಲ. ಶರಣಧರ್ಮದ ಕೋಟೆ ಈ ಅಷ್ಟಾವರಣಗಳು. ಈ ಅಷ್ಟಾವರಣಗಳನ್ನು ಕುರಿತು ಶರಣರು ಇನ್ನಿಲ್ಲದಷ್ಟು ಚರ್ಚಿಸಿದ್ದಾರೆ. ಅವರ ಚರ್ಚೆ ಈ ಅಷ್ಟಾವರಣಗಳ ಶಿಖರರೂಪಗಳಾದ ಗುರು ಲಿಂಗ ಜಂಗಮವನ್ನು ಕುರಿತು ಪ್ರಧಾನವಾಗಿರುತ್ತದೆ.

ಶರಣರ ಗುರುತತ್ವ ಮತ್ತೆ ಜ್ಞಾನದ ನಿಧಿಯೂ ಸರ್ವಾಧಿಕಾರಿಯೂ ಆದವನ ಪಾತ್ರವಲ್ಲ. ಅದು ಬೆಳೆಯಿಸುವ ಮತ್ತು ಬೆಳೆವ ಮತ್ತು ಗುರು ಶಿಷ್ಯರಿಬ್ಬರೂ ಬೆಳಕೇ ಆಗುವ ಮಾರ್ಗದ್ದು. 'ಗುರುವಿಂಗೂ ಶಿಷ್ಯಂಗೂ ಆವುದು ದೂರ, ಆವುದು ಸಾರೆಯೆಂಬುದನಾರು ಬಲ್ಲರು? ಗುರುವೆ ಶಿಷ್ಯನಾದ ತನ್ನ ವಿನೋದಕ್ಕೆ; ಶಿಷ್ಯನೆ ಗುರುವಾದ ತನ್ನ ವಿನೋದಕ್ಕೆ. ಕರ್ಮವೆಂಬ ಕೌಟಿಲ್ಯ ಎಡೆವೊಕ್ಕ ಕಾರಣ, ಭಿನ್ನವಾಗಿ ಇದ್ದಿತೆಂದರೆ ಅದು ನಿಶ್ಚಯವಹುದೆ? ಆದಿಯನಾದಿಯಿಂದತ್ತತ್ತ ಮುನ್ನವಾದ ಪರತತ್ವಮಂ ತಿಳಿದು ನೋಡಲು, ನೀನೆ ಸ್ವಯಂಜ್ಯೋತಿ ಪ್ರಕಾಶನೆಂದರಿಯಲು, ನಿನಗೆ ನೀನೆ ಗುರುವಲ್ಲದೆ ನಿನ್ನಿಂದಧಿಕಮಪ್ಪ ಗುರು ಉಂಟೇ? ಇದು ಕಾರಣ ಗುಹೇಶ್ವರ ಲಿಂಗವು ತಾನೆ ಎಂಬುದನು ನಿನ್ನಿಂದ ನೀನೇ ಅರಿಯಬೇಕು ನೋಡಾ' ಎಂದು ಮುಕ್ತಾಯಕ್ಕನಿಗೆ ಪ್ರಭು ಹೇಳುವ ಮಾತು ಮನನಾರ್ಹವಾದುದು. ಗುರುವಿಲ್ಲದೆಯೆ ವಿದ್ಯೆ ಸಾಧ್ಯವಿಲ್ಲವೆಂದು, ಗುರುವಿನಂತಿದ್ದ ಅಣ್ಣ–ಅಜಗಣ್ಣನನ್ನು ಕಳೆದುಕೊಂಡು ಭ್ರಾಂತಳಾಗಿದ್ದ ಮುಕ್ತಾಯಿಗೆ, ಪ್ರಭು ಎರಡು ಮುಖ್ಯ ಸಂಗತಿಗಳನ್ನು ಮನವರಿಕೆ ಮಾಡಿಕೊಡಲು ಯತ್ನಿಸುತ್ತಾನೆ. ಒಂದು, ಗುರು ಮತ್ತು ಶಿಷ್ಯರು ಇಬ್ಬರೂ ಜ್ಞಾನದ ಎರಡು ಮುಖಗಳು. ಒಂದು ಮುಖವನ್ನು ಬಿಟ್ಟು ಇನ್ನೊಂದು ಮುಖ ಇರುವುದು ಸಾಧ್ಯವೆ? ಹಾಗೆಯೇ ಗುರು ಮತ್ತು ಶಿಷ್ಯರು ಎಂದು ಸೂಚಿಸುವಾಗ, ಜ್ಞಾನದ ಎರಡು ತುದಿಯಲ್ಲಿರುವ, ಒಂದೇ ಆಗಲು ಯತ್ನಿಸುವ ಜ್ಞಾನಿದ್ವಯರು –ಗುರು ಶಿಷ್ಯರು ಆಗಿಬಿಡುತ್ತಾರೆ. ಗುರುವಾಗುವುದು– ಶಿಷ್ಯೋದ್ಧಾರಕ್ಕೆ; ಶಿಷ್ಯ ಆಗುವುದು ಗುರುವಿನ ಜ್ಞಾನದ ಸಾರ್ಥಕತೆಗೆ. ಹೀಗೆ ಎರಡೂ ವ್ಯಕ್ತಿತ್ವಗಳು ಜ್ಞಾನದ ಎರಡು ಪೂರಕಶಕ್ತಿಗಳಾಗಿ ಒಂದರೊಡನೊಂದು ಮೇಳವಿಸಿ ಒಂದೇ ಆಗುವ ಅರಿವಿನ ಕ್ರಿಯೆ ಅದು.





ನನಗೊಂದು ಗುರುವಿಲ್ಲ ಎಂದು ಭ್ರಮೆ ಪಡುವವರ ಭ್ರಮೆಯನ್ನು ದೂರ ಮಾಡುವ ವಾಸ್ತವ ಸತ್ಯ–ಗುರುವಿಗೆ ಗುರುವಾದವನ ಗುರು ಯಾರು? ಎಂಬ ಪ್ರಶ್ನೆ ಇಲ್ಲಿ ಉತ್ತರ ರೂಪವಾಗಿ ನಿನಗೆ ನೀನೇ ಗುರುವಾಗಬೇಕು ಎನ್ನುತ್ತದೆ. ತನಗೆ ತಾನೇ ಗುರುವಾಗುವ ಸೃಜನಾತ್ಮಕ ಕ್ರಿಯೆಯೇ, ಶಿಷ್ಯನನ್ನು ಗುರುವಾಗಿ ಮಾಡುವಂಥ ಪವಾಡಶಕ್ತಿ. ಯಾರಿಗೆ ಕಲಿಯುವ ಬಯಕೆಯಿಲ್ಲವೋ, ಅಂಥವರಿಗೆ ಕಲಿಸುವುದು ಸಾಧ್ಯವೆ? ಎಂಬ ಪ್ರಶ್ನೆ ಇಲ್ಲಿ ಏಳುವುದಿಲ್ಲ. ತನ್ನನ್ನು ತಾನು ಅರಿಯುವ ಕ್ರಿಯೆಗೆ ಸಿದ್ಧನಾಗಿಲ್ಲದಿದ್ದರೆ ಅರಿವಿನ ಲೋಕ ತನ್ನದಾಗಿಸುವುದಿಲ್ಲವೆಂಬ ಅಂಶವನ್ನಿದು ವ್ಯಂಜಿಸುತ್ತದೆ.

ಗುರುತತ್ವವನ್ನು ಇನ್ನಷ್ಟು ಚರ್ಚೆಗೆ ಗುರಿ ಮಾಡುವ ಅಲ್ಲಮನ ಈ ವಚನವನ್ನು ಗಮನಿಸಿ:

***'ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದರೇನು? ಹಸಿವು ಹೋಹುದೆ? ಅಂಗದ ಮೇಲೆ ಲಿಂಗ ಸ್ವಾಯತವಾದರೇನು? ಭಕ್ತನಾಗಬಲ್ಲನೆ? ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ, ಆ ಕಲ್ಲು ಲಿಂಗವೆ? ಆ ಮೆಳೆ ಭಕ್ತನೆ? ಇಟ್ಟಾತ ಗುರುವೆ? ಇಂತಪ್ಪವರ ಕಂಡಡೆ ನಾಚುವೆನಯ್ಯಾ ಗುಹೇಶ್ವರಾ.'***

ಆರಂಭದಲ್ಲಿ ಎರಡು ಪ್ರಶ್ನೆಗಳಿವೆ. ಮೊದಲ ಪ್ರಶ್ನೆ ಕಟ್ಟೋಗರದ ಮೊಟ್ಟೆಯನ್ನು ಕುರಿತದ್ದು. ಅದನ್ನು ಹೊಟ್ಟೆಯ ಮೇಲೆ ಕಟ್ಟಿಕೊಂಡರೆ ಪ್ರಯೋಜನವಿಲ್ಲ; ಅದು ಕರುಳಿಗಿಳಿಯಬೇಕು ಎಂಬುದನ್ನು ಸೂಚಿಸುತ್ತದೆ; ಮೊದಲನೆಯ ಪ್ರಶ್ನೆ ಗುರು ನೀಡುವ ಜ್ಞಾನ ಇಂಥ ಹೊಟ್ಟೆಯ ಮೇಲೆ ಕಟ್ಟಿಕೊಂಡ ಕಟ್ಟೋಗರದ ಮೊಟ್ಟೆಯಾಗಬಾರದು ಎಂದು ಹೇಳಿ, ಗುರು ಮತ್ತು ಶಿಷ್ಯರಿಬ್ಬರ ಜವಾಬ್ದಾರಿಗಳನ್ನು ಸೂಚಿಸುತ್ತದೆ. ಈ ನಿದರ್ಶನದಿಂದ ಮೊದಲ ಪ್ರಶ್ನೆಯಿಂದ ಅಲ್ಲಮಪ್ರಭು ಮೈಮೇಲೆ ಧರಿಸಿದ ಇಷ್ಟಲಿಂಗದ ವಿಚಾರಕ್ಕೆ ಬರುತ್ತಾನೆ. ಮೊದಲ ಪ್ರಶ್ನೆಯಲ್ಲೆ ಒಂದು ನಿದರ್ಶನದಂತೆ ಈ ಲಿಂಗವೂ ಹೊಟ್ಟೆಯ ಮೇಲೆ ಕಟ್ಟಿಕೊಂಡ ಕಟ್ಟೋಗರವಾಗಬಾರದು ಎಂದು ಸೂಚಿಸುತ್ತಾನೆ. ಇಲ್ಲಿಗೇ ನಿಲ್ಲುವುದಿಲ್ಲ– ಪ್ರಭುವಿನ ಚಿಂತನೆಯ ಕ್ರಮ ಮತ್ತೊಂದು ದೃಷ್ಟಾಂತವನ್ನು ಕಣ್ಣೆದುರು ನಿಲ್ಲಿಸುತ್ತದೆ. ಯಾರಾದರೂ ಒಂದು ಕಲ್ಲನ್ನು ಬಿದಿರಮೆಳೆಗೆ ಎಸೆದರೆ ಆ ಕಲ್ಲು ಅಲ್ಲಿ ಸಿಕ್ಕಿಕೊಳ್ಳಬಹುದು. ಅಂಥ ಕಲ್ಲನ್ನು ಲಿಂಗ ಎಂದು ಕರೆಯಬಹುದೆ? ಹಾಗೆ ಕಲ್ಲು ಎಸೆದವನನ್ನು ಗುರು ಎನ್ನಬೇಕೆ? ಹಾಗೆ ಕಲ್ಲು ಧರಿಸಿದ ಮೆಳೆ ಭಕ್ತನಾದೀತೆ? ಎಂಬ ಮೂರೂ ಪ್ರಶ್ನೆಗಳು ಸಹಜವಾಗಿಯೆ ನಿಷೇಧಾರ್ಥ ಸೂಚಕವಾಗಿಬಿಡುತ್ತವೆ.

ಅಂದರೆ, ಧರಿಸಿದ್ದ ಮಾತ್ರಕ್ಕೆ ಲಿಂಗವಾಗುವುದಿಲ್ಲ; ಅದು ಶಿವಸ್ವರೂಪವೆಂಬ ಅನುಭಾವ ಮೂಡಿದಾಗ ಮಾತ್ರ ಲಿಂಗವಾಗುತ್ತದೆ. ಹಾಗೆಯೇ ಆ ಲಿಂಗವನ್ನು ಧರಿಸಿದವನು ಅದು ಶಿವನೆಂಬ ಭಾವ–ಭಕ್ತಿ ತಾಳಿದಾಗ ಮಾತ್ರ ಭಕ್ತನಾದಾನು. ಅಷ್ಟೇ ಅಲ್ಲ, ಅಂಥ ಲಿಂಗವನ್ನು ಧರಿಸುವಂತೆ ಮಾಡಬಲ್ಲ ವ್ಯಕ್ತಿ ಮಾತ್ರ ಗುರು ಆಗಬಲ್ಲ ಎಂಬ ಮಾತುಗಳಲ್ಲಿ ಗುರು, ಇಷ್ಟಲಿಂಗ ಮತ್ತು ಭಕ್ತರನ್ನು ಕುರಿತ ಚರ್ಚೆಯನ್ನು ಕೈಗೆತ್ತಿಕೊಳ್ಳುತ್ತಾನೆ, ಪ್ರಭು. ಈ ಚರ್ಚೆ ಚನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದವರಲ್ಲಿ ಸುದೀರ್ಘವಾಗಿ ಮುಂದುವರೆಯುತ್ತದೆ. ಅಷ್ಟೇ ಏಕೆ, ಈ ಚರ್ಚೆ ಮುಂದುವರಿದಾಗ ಅಮುಗಿ ರಾಯಮ್ಮನಂಥವರು ಚನ್ನಬಸವಣ್ಣ ಹೇಳಿರದಿದ್ದರೂ, ಚನ್ನಬಸವಣ್ಣನೇ ಹೇಳಿದನೆಂದು ಇಷ್ಟಲಿಂಗ ಕೆಳಕ್ಕೆ ಬಿದ್ದಾಗ ಆತ್ಮಾಹುತಿ ಮಾಡಿಕೊಳ್ಳಲೇಬೇಕೆಂದೂ ಆದೇಶಿಸಿಬಿಡುತ್ತಾಳೆ. ಇದರ ಮಥಿತಾರ್ಥ ಇಷ್ಟೇ– ಶರಣರು ಇಷ್ಟಲಿಂಗ–ಗುರು–ಭಕ್ತ–ಜಂಗಮ ಈ ವಿಚಾರಗಳನ್ನು ಕುರಿತು ಸುದೀರ್ಘವಾಗಿ ಚರ್ಚಿಸಿದರು. ಇಂಥ ಚರ್ಚೆಯ ವೇದಿಕೆಯೇ ಅನುಭವ ಮಂಟಪ.

ಈ ಅನುಭವ ಮಂಟಪ ಎನ್ನುವುದು ಒಂದು ನಿಗದಿಯಾದ ಕಟ್ಟಡ ಅಥವಾ ಪೀಠ ಅಲ್ಲ; ಶರಣರು ತಮ್ಮ ಅನುಭವಗಳನ್ನು ಹಂಚಿಕೊಳ್ಳುವ ಹಾಗೂ ಅನುಭವಗಳ ಮೂಲಕ ಹೊಸ ಬದುಕಿನ ಮೌಲ್ಯಗಳನ್ನು ಕಂಡುಕೊಳ್ಳುವ ಒಂದು ಚಲನಶೀಲ ಕೇಂದ್ರವಾಗಿತ್ತು. ಆದ್ದರಿಂದಲೆ ಅವರು ಈ ಅನುಭವ ಮಂಟಪದಲ್ಲಿ ಕೇವಲ ಗುರು, ಲಿಂಗ, ಜಂಗಮ ಇವುಗಳನ್ನು ಮಾತ್ರ ಚರ್ಚಿಸಲಿಲ್ಲ. ಅಷ್ಟಾವರಣ ಪಂಚಾಚಾರ ಮತ್ತು ಷಟ್ಸ್ಥಲ ಎಂಬ ಮೂರನ್ನು ಕುರಿತು ಬಹುವಿಸ್ತಾರವಾಗಿ ಚರ್ಚಿಸಿದರು. ಆಶ್ಚರ್ಯ ಎಂದರೆ, ಅವರ ಆ ಚರ್ಚೆ ತಮ್ಮ ವಿದ್ವತ್ತನ್ನು ಮೆರೆಯುವ ದುರಹಂಕಾರವಾಗಿರಲಿಲ್ಲ; ಬದುಕಿನ ಮೌಲ್ಯಗಳನ್ನು ಹುಡುಕುವ ಹುಡುಕಾಟವಾಗಿತ್ತು. ನೆಲದಾಳದ ಗಣಿಗಳನ್ನಗೆದು ಬಂಗಾರ ಬೆರೆತ ಕಲ್ಲನ್ನು ಹೊರತಂದು ಶುದ್ಧ ಅಪರಂಜಿ ಮಾಡಿದಂತೆ, ಅವರು ಮಾನವ ಮೌಲ್ಯಗಳನ್ನು ಶೋಧಿಸಿದರು.

ಆದ್ದರಿಂದಲೆ ಅವರು ಯಾವುವು ಶರಣ ಧರ್ಮದ ಮೂರು ಶಿಖರಗಳಾಗಿದ್ದವೋ, ಆ ಗುರು–ಲಿಂಗ–ಜಂಗಮ ಇವುಗಳನ್ನು ದಾಟಿ ಬದುಕಿನ ಮೌಲ್ಯಗಳಲ್ಲಿ ವಿರಮಿಸುವ ಸಾಹಸ ಮಾಡಿದರು. ಅದರ ಪರವಾಗಿಯೆ ಅವರು ಹೇಳಿದ್ದು– ಕಾಯಕ ತತ್ವದ ಮಹತ್ವವನ್ನು. ಕಾಯಕದಲ್ಲಿ ನಿರತನಾದರೆ, ಗುರು ದರುಶನವಾದರೂ ಮರೆಯಬೇಕು;

ಲಿಂಗಪೂಜೆಯಾದರೂ ಮರೆಯಬೇಕು; ಜಂಗಮ ಮುಂದಿದ್ದಡೂ ಹಂಗು ಹರಿಯಬೇಕು, ಕಾಯಕವೆ ಕೈಲಾಸವಾದ ಕಾರಣ, ಅಮರೇಶ್ವರ ಲಿಂಗವಾಯಿತ್ತಾದರೂ, ಕಾಯಕದೊಳಗು. ಗುರು ಲಿಂಗ ಜಂಗಮಗಳನ್ನೂ ನಿರ್ಲಕ್ಷಿಸುವ ನೆಲೆ ಯಾವುದು ಎಂಬುದರ ಬೋಧೆ ಮಹತ್ವಪೂರ್ಣವಾದದ್ದು. ಏಕೆಂದರೆ ಮಾನವ ಸಮಾಜದ ಉತ್ಪಾದಕ ಶಕ್ತಿಯಾಗಿ ಮಾತ್ರವೆ ಅವರು ಕಾಯಕವನ್ನು ರೂಪಿಸಲಿಲ್ಲ. ಆ ದರ್ಶನವನ್ನು ಅಂದರೆ, ಉತ್ಪಾದಕಶಕ್ತಿಯನ್ನು ವಿತರಣ ತತ್ವವಾದ ದಾಸೋಹದೊಂದಿಗೆ ಮೇಳೈಸಿದ್ದು ಮಾತ್ರ ಅಪೂರ್ವವಾದದ್ದು. ವ್ಯಕ್ತಿ ಉತ್ಪಾದಕನಾಗಬೇಕು; ಹಾಗೆ ಉತ್ಪಾದಕನಾಗುವುದು ಸಂಗ್ರಹಗುಣದಿಂದ ವಿನಾಶಕಾರಕನಾಗುವುದಕ್ಕಾಗಿ ಅಲ್ಲ; ತಾನು ಬದುಕುವ ಮಾನವ ಸಮಾಜದ ಸ್ವಾಸ್ಥ್ಯಕ್ಕಾಗಿ ಎಂಬ ನಿಲವನ್ನು ತಾಳುತ್ತಲೇ, ಕಾಯಕದ ದರ್ಶನವನ್ನು ಮತ್ತೆ ಮತ್ತೆ ನುಲಿಯ ಚಂದಯ್ಯ, ಆಯ್ದಕ್ಕಿ ಲಕ್ಕಮ್ಮ, ಆಯ್ದಕ್ಕಿ ಮಾರಯ್ಯ ಮುಂತಾದವರು ವಚನ ಚಿಂತನೆಗಳಲ್ಲಿ ಹರಳುಗಟ್ಟಿಸುವ ಯತ್ನ ಮಾಡುತ್ತಾರೆ.

ಶರಣರಿಗೆ ಬೇಕಾದದ್ದು ಬೋಧನೆಯಲ್ಲ; ಬದುಕು. ಈ ಮರ್ತ್ಯವೇ ಕೈಲಾಸವಾಗಿರುವಂಥ ಬದುಕು. ಅದಕ್ಕಾಗಿ ಅವರು ಕಾಯಕ ತತ್ವದ ಮಿತಿಯನ್ನೂ ಕಂಡುಕೊಂಡ ಸೂಚನೆಗಳಿವೆ. ಏಕೆಂದರೆ ಕಾಯಕದ ಮಹತ್ವ ಹೆಚ್ಚಾಗುತ್ತಿದ್ದಂತೆ ವ್ಯಕ್ತಿಯ ವೃತ್ತಿ, ವಂಶ ಪರಂಪರೆಯಾಗಿ, ಅದೂ ಒಂದು ಬಂಧನವಾಗುವ ಅಪಾಯವೂ ಅವರಿಗೆ ಮನವರಿಕೆಯಾದಂತೆ ತೋರುತ್ತದೆ. ಏಕೆಂದರೆ ವೃತ್ತಿ ಪ್ರಾವೀಣ್ಯ ಪಡೆದ ಕ್ಷೌರಿಕ, ತನ್ನ ವೃತ್ತಿಯನ್ನು ಗೌರವದಿಂದ ಕಂಡಂತೆ ಇತರರೂ ಕಂಡಾರು. ಆದರೆ ಆ ವೃತ್ತಿ ವಂಶಪಾರಂಪರ್ಯವಾಗಿ ಬಿಟ್ಟರೆ ಹೇಗೆ? ವ್ಯಕ್ತಿಯಲ್ಲಿರುವ ವಿಶೇಷ ಪ್ರತಿಭೆಗಳಿಗೆ ಅದು ಒಂದು ಬಂಧನವೂ, ತೊಡಕೂ ಆದೀತಲ್ಲವೆ? ಕ್ಷೌರಿಕನ ಮಗ ಒಬ್ಬ ವಿದ್ವಾಂಸನಾಗಲು ಸಾಧ್ಯವಿಲ್ಲವೆ? ಎಂದು ಪ್ರಶ್ನಿಸಬೇಕಾದ ಅಗತ್ಯವೇ ಇಲ್ಲ. ನಾನೇ ಕಂಡಂತೆ ವಿದ್ವಾಂಸನ ಮಗ ಒಬ್ಬ ಸಾಮಾನ್ಯ ಕಾರಕೂನ ಆದದ್ದುಂಟು. ಹಾಗೆಯೇ ವಿಶ್ವವಿದ್ಯಾಲಯದ ಪದವೀಧರ ಒಬ್ಬ ಶ್ರೇಷ್ಠ ಬೇಸಾಯಗಾರ ಆದದ್ದುಂಟು. ಬೇಸಾಗಾಯರನ ಮಗ ಒಬ್ಬ ವಿಜ್ಞಾನಿ ಆದದ್ದುಂಟು. ಹಾಗೆಯೇ ವಿಜ್ಞಾನಿಯ ಮಗ ಒಬ್ಬ ಕವಿಯಾದದ್ದುಂಟು. ಹಾಗೆಯೇ ವಿಜ್ಞಾನಿಯ ಮಗ ಒಬ್ಬ ಕವಿ ಅಥವಾ ಕಲಾವಿದ ಆದದ್ದುಂಟು. ಆದರೆ ಅದು ಪರಂಪರೆಯಾಗಿ ವಂಶದ ಅಗತ್ಯವಾಗಿಬಿಟ್ಟರೆ, ಆ ವಂಶದ ವ್ಯಕ್ತಿಗಳ ವೈಯಕ್ತಿಕ ಪ್ರತಿಭೆ ಹಾಗೂ ಆಕಾಂಕ್ಷೆಗಳೇ ಆತಂಕಕಾರಿಯಾಗ ತೊಡಕಾಗಿಬಿಡುತ್ತದೆ. ಹನ್ನೆರಡನೆಯ ಶತಮಾನದಷ್ಟು ಹಿಂದೆಯೇ ಶರಣರು ಇದನ್ನು ಅರ್ಥಮಾಡಿಕೊಂಡು, ಇದಕ್ಕೊಂದು ಪರಿಹಾರ ಸೂಚಿಸಿದ ಒಂದು ಕ್ರಾಂತಿಕಾರಕ ಘಟನೆಯೇ ಮಚ್ಚಿಗನಾದ ಹರಳಯ್ಯ ಮತ್ತು ಮಂತ್ರಿಯಾಗಿದ್ದ ಮಧುವರಸನ ಕುಟುಂಬಗಳ ಮಧ್ಯೆ ನಡೆದ ರಕ್ತ ಸಂಬಂಧದ ವಿಷಯ. ಆಗ ನಡೆದ, ಈಗನ್ನಿಸುವಂಥ ಆ ಅಂತರ್ಜಾತೀಯ ವಿವಾಹ ಅನೇಕ ರೀತಿಗಳಲ್ಲಿ ಕ್ರಾಂತದರ್ಶಿಯಾದುದು. ಮೊದಲನೆಯದಾಗಿ, ಅದು ವ್ಯಕ್ತಿಯ ಯೋಗ್ಯತೆಯತ್ತ ಹಾಗೂ ಅರ್ಹತೆಗಳ ಕಡೆಗೆ ಲಕ್ಷ್ಯವಿಟ್ಟದ್ದು. ಎರಡನೆಯದಾಗಿ, ಈ ವಿವಾಹ ವೈಜ್ಞಾನಿಕವಾಗಿಯೂ ಮುಂದಿನ ತಲೆಮಾರಿನ ಬೆಳವಣಿಗೆಯ ದೃಷ್ಟಿಯಿಂದ ಎಷ್ಟು ಉಪಯುಕ್ತ ಎಂಬುದನ್ನು ಧ್ವನಿಸುವುದು. ಮೂರನೆಯದು ಮತ್ತು ಮುಖ್ಯವಾದದ್ದು- ಯಾವುದನ್ನು ಆ ಶತಮಾನ ವಿಲೋಮ ವಿವಾಹವೆಂದು ನಿರಾಕರಿಸಿ, ಅಸ್ಪೃಶ್ಯತೆಯನ್ನು ನಿರಾತಂಕವಾಗಿ ನಿವಾರಣೆಯ ಮಹಾದ್ವಾರವನ್ನಾಗಿ ತೆರೆದುದೇ ಅಲ್ಲದೆ, ಮನುಸ್ಮೃತಿಯಲ್ಲಿದ್ದ ಮೇಲುಜಾತಿಯ ಹೆಣ್ಣು ಮತ್ತು ಕೀಳುಜಾತಿಯ ಗಂಡು ಕೂಡಬಾರದೆಂದು ಹೇಳಿದ್ದ ಮೂರ್ಖ ನಿಷೇಧವನ್ನು ಮುರಿದು, ಮನುಷ್ಯ ಮನುಷ್ಯರ ಮಧ್ಯೆ ಯಾವುದೇ ಭೇದವಿರದಂಥ ಮಾನುಷ ಘನತೆಯ ಆದರ್ಶವನ್ನು ಕಾರ್ಯರೂಪಕ್ಕೆ ತಂದದ್ದು.

ಶರಣರು ಸಾಮಾಜಿಕ ಪಿಡುಗುಗಳಿಗೆ ಪರಿಹಾರಗಳನ್ನು ರೂಪಿಸಲು ಹೋಗಲಿಲ್ಲ. ಅವುಗಳನ್ನು ಕಂಡುಕೊಳ್ಳಲು ಮೊದಲು ಯತ್ನಿಸಿದರು; ಆ ಯತ್ನದಲ್ಲಿ ಅವರಿಗೆ ಮೊಟ್ಟಮೊದಲ ಗಮನಾರ್ಹ ಸಂಗತಿ, ಈ ಲೋಕದ ಬದುಕು ಆಯಿತು.

*'ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ ಕೂಡಲಸಂಗಮದೇವ.'* ಈ ವಚನವನ್ನು ಗಮನಿಸಿದರೆ ತಿಳಿಯುತ್ತದೆ- ಮನುಷ್ಯನ ಜವಾಬ್ದಾರಿಯೆನ್ನುವುದು ಈ ಲೋಕದ ಬದುಕಿಗೆ ಸಂಬಂಧಿಸಿದ್ದು; ಇಲ್ಲಿ ಆತ ಅರ್ಥಪೂರ್ಣನಾದರೆ ಬೇರೆ ಲೋಕದಲ್ಲೂ ಆತ ಅನಿವಾರ್ಯವಾಗಿಯೇ ಅರ್ಥಪೂರ್ಣನಾಗುತ್ತಾನೆ. ಇಲ್ಲಿ ಆತ ಅನರ್ಹನಾದರೆ ಮತ್ತೆಲ್ಲಿಯೂ ಆತ ಅರ್ಹನಾಗುವುದೇ ಇಲ್ಲ ಎಂಬ ಧೋರಣೆಯ ಹಿಂದಿರುವುದು ಈ ಲೋಕದ ಬದುಕಿನ ಮೇಲೆ ಇರುವ ಅವಧಾರಣೆ.

ಶರಣರಿಗೆ ಈ ಲೋಕ ಅರ್ಥಪೂರ್ಣವಾಗಿದ್ದರಿಂದಲೇ ಅವರು ಈ ಲೋಕದ ಬದುಕಿನಲ್ಲಿ ಮಾನವನೇ ನಿರ್ಮಿಸಿದ ಅಡ್ಡಗೋಡೆಗಳು ಅರಿವಾದುವು. ಹೀಗೆ ಅವರು ಈ ಲೋಕದ ಬದುಕಿನ ಮಹತ್ವವನ್ನು ಮನಗಾಣುತ್ತಿದ್ದಂತೆಯೇ, ಆವರೆಗೆ





ಸಮಾಜದಲ್ಲಿದ್ದ ಅನೇಕ ತಪ್ಪು ಕಲ್ಪನೆಗಳನ್ನು ಅವರು ನಿವಾರಿಸಲು ಯತ್ನಿಸಿದರು. ಅವುಗಳಲ್ಲಿ ಪ್ರಪ್ರಥಮವಾದುದು ಸಿದ್ಧರಾಮನ ವಚನದ ಈ ಪಾಠ.

**ಭಕ್ತನ ಮನ ಹೆಣ್ಣಿನೊಳಗಾದೊಡೆ,**
**ವಿವಾಹವಾಗಿ ಕೂಡುವುದು;**
**ಭಕ್ತನ ಮನ ಮಣ್ಣಿನೊಳಗಾದೊಡೆ**
**ಕೊಂಡು ಆಲಯವ ಮಾಡುವುದು;**
**ಭಕ್ತನ ಮನ ಹೊನ್ನಿನೊಳಗಾದೊಡೆ**
**ಬಳಲಿ ದೊರಕಿಸುವುದು ನೋಡಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಈವರೆಗೆ ಹೆಣ್ಣು ಮಾಯೆ, ಹೊನ್ನು ಮಾಯೆ ಮತ್ತು ಮಣ್ಣು ಮಾಯೆ ಎಂಬ ದೃಷ್ಟಿಯಿದ್ದು ಮಾನವ ಜೀವನವನ್ನು ಅನಗತ್ಯವಾಗಿ ವೈರಾಗ್ಯದತ್ತ ತಳ್ಳುತ್ತಿತ್ತು. ಶರಣರು ಇದಕ್ಕೆ ಕಂಡುಕೊಂಡ ಪರಿಹಾರವು ಸಾಮಾಜಿಕ ಬದ್ಧತೆಯಿಂದ ಕೂಡಿದುದೆಂಬುದನ್ನು ಮರೆಯಬಾರದು.

ಹೆಣ್ಣಿನ ಆಸೆ ಗಂಡಿಗೆ ಬರುವುದು ಸಹಜ; ಹಾಗೆಯೇ ಗಂಡಿನ ಆಸೆ ಹೆಣ್ಣಿಗೆ; ಆದರೆ ಆ ಸಹಜ ಆಸೆ ಸಾಮಾಜಿಕ ವ್ಯವಸ್ಥೆಯನ್ನು ಪುಡಿಗಟ್ಟುವ ಸ್ವೇಚ್ಛಾಚಾರ ಆಗಬಾರದು. ಸಮಾಜ ಅಂಗೀಕರಿಸಿದ ಮೌಲ್ಯಗಳಾಗಬೇಕು. ಗಂಡು ಮತ್ತು ಹೆಣ್ಣು ವಿವಾಹವಾಗುವುದು ಎಂದರೆ ಸಾಮಾಜೀಕರಣಕ್ಕೆ ಒಳಗಾಗುವುದು ಎಂದೇ ಅರ್ಥ.

ಇನ್ನು ಎರಡನೆಯದಾಗಿ ಮಣ್ಣಿನಾಸೆ. ಅದು ಉಂಟಾದಾಗ ವ್ಯಕ್ತಿ **'ಕೊಂಡು'** ಮನೆ ಮಾಡಬೇಕು; ಆಸ್ತಿಯನ್ನಲ್ಲ; **'ಕೊಂಡು'** ಎಂಬ ಮಾತು ಶ್ರಮಿಸಿ ಪಡೆದ ದುಡಿಮೆಯನ್ನು ಸೂಚಿಸುತ್ತದೆ. ಮುಂದೆ ಬಂಗಾರದ ಆಸೆಯ ವಿಷಯದಲ್ಲೂ ಹಾಗೆಯೇ **'ಬಳಲಿ ದೊರಕಿಸುವುದು'** ಎಂಬ ಮಾತುಗಳಲ್ಲಿ ಶ್ರಮಿಸಿ ದುಡಿವ ಕಾಯಕದ ತತ್ವವನ್ನೆ ಸೂಚಿಸಲಾಗಿದೆ. ಮೊದಲ ಬಾರಿಗೆ ಶರಣರು ಬದುಕಿನ ವಾಸ್ತವಗಳಿಗೆ ಗಮನಹರಿಸಿದುದನ್ನು ಇದು ಸೂಚಿಸುತ್ತದೆ. ಇದಕ್ಕೆ ಕಾರಣ ಕೂಡ ಅವರೇ ಹೇಳುವಂತೆ ಈ ದೇಹ ಶಿವಮಯವಾದುದು ಎಂಬ ಗಾಢವಾದ ನಂಬಿಕೆ. ಆ ಕಾರಣದಿಂದಲೇ ಈ ದೇಹದ ವಿಸರ್ಜನೆ ಅಥವಾ ತ್ಯಾಗದತ್ತ ಅವರು ಗಮನ ಹರಿಸಲಿಲ್ಲ -ಇದರ ಮಹತ್ವವನ್ನು ಮನಗಾಣಿಸಿದ್ದು ಹೀಗೆ:

*"ಓಂ ಎಂಬಕ್ಷರವೆ ರಸ, ನ ಎಂಬಕ್ಷರವೇ ರುಧಿರ, ಮಾ ಎಂಬಕ್ಷರವೆ ಮಾಂಸ, ಶಿ ಎಂಬಕ್ಷರವೆ ಮೇದಸ್ಸು, ವಾ ಎಂಬಕ್ಷರವೆ ಆಸ್ತಿ, ಯ ಎಂಬಕ್ಷರವೇ ಮಜ್ಜೆ ಷಡಕ್ಷರದಿಂದ ಶುಕ್ಲಶೋಣಿತ ಇಂತೀ ಪಂಚೇಂದ್ರಿಯಗಳುತ್ಪತ್ತಿ ಕೂಡಲ ಚೆನ್ನಸಂಗಮದೇವ."*

ಚೆನ್ನಬಸವಣ್ಣನ ಮೇಲಿನ ವಚನ ಈ ಮನುಷ್ಯ ದೇಹದ ಪಾವಿತ್ರ್ಯ ಶಕ್ತಿಗಳನ್ನು ಧ್ವನಿಸಿದ ರೀತಿ ಅದ್ಭುತವಾದದ್ದು. ಈ ದೇಹ ಎಷ್ಟು ಅರ್ಥಪೂರ್ಣ ಎಂದರೆ ಇದರ ಒಂದೊಂದಂಶವೂ, ಪಂಚೇಂದ್ರಿಯಗಳೂ ಪರಮ ಪವಿತ್ರವಾದುವು; ತ್ಯಾಜ್ಯವಾದುವುಗಳಲ್ಲ. ಸಿದ್ಧರಾಮಣ್ಣನ ವಚನ ಹಾಗೂ ಚೆನ್ನಬಸವಣ್ಣನ ವಚನಗಳೆರಡನ್ನೂ ಒಟ್ಟೊಟ್ಟಿಗೆ ಗಮನಿಸಿದಾಗ ಈ ನೆಲದ ಬದುಕಿನ ಉಲ್ಲಾಸ ರೋಮಾಂಚಕತೆಗಳೇ ಅಲ್ಲದೆ ಅರ್ಥಪೂರ್ಣತೆಯ ಅರಿವೂ ಆಗುತ್ತದೆ. ಇಂಥ ಆಳವಾದ ಜೀವನಶ್ರದ್ಧೆಯಿಂದ ದೀಪ್ತವಾದದ್ದು ಶರಣರ ದರ್ಶನ.

ಆದ್ದರಿಂದಲೇ ಅವರು ಸೂಚಿಸುವ ಪರಿಹಾರದ ಮಾರ್ಗಗಳು ಯಾವಾಗಲೂ ಶುದ್ಧ ಆಚರಣೆಯ ಅಸ್ತಿವಾರದ ಮೇಲೆಯೇ ರೂಪಿತವಾದವುಗಳಾಗಿವೆ. ಅವರು ಎಂದೂ ನಡೆ ಮತ್ತು ನುಡಿಗಳಲ್ಲಿ ಭೇದ ಉಂಟಾಗುವುದನ್ನು ಒಪ್ಪಲಿಲ್ಲ. ನಡೆದು ಬದುಕಿದ ನುಡಿಗಳು ಅವರವು. ಆದ್ದರಿಂದಲೇ ಮಾತು ಮತ್ತು ಕೃತಿಗಳಿಗಿರುವ ಸಂಬಂಧವನ್ನು ಅವರು ವಿಶ್ಲೇಷಿಸಿದ್ದು ಹೀಗೆ: ***"ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು, ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು, ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು, ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಯ್ಯನೆಂತೊಲಿನವಯ್ಯಾ?"*** ಮೇಲಿನ ವಚನದಲ್ಲಿರುವ ಮೊದಲ ನಾಲ್ಕು ವಾಕ್ಯಗಳು ಮಾತಿನ ಒಂದೊಂದು ವಿಶೇಷ ಗುಣವನ್ನು ನಿರ್ದೇಶಿಸುತ್ತವೆ; ಮೆಟ್ಟಿಲು ಮೆಟ್ಟಿಲಾಗಿ ಮಾತಿನ ಅರ್ಥ ಮೇಲೇರುತ್ತ ಬಂದು ಶಿವನನ್ನೊಲಿಸುವ ವಾಣಿಯ ಮಟ್ಟಕ್ಕೇರುತ್ತದೆ. ಆದರೆ ಬಸವಣ್ಣ ಇಲ್ಲಿ ಒಂದು ಹೊಸ ದಿವ್ಯವನ್ನು ನಮ್ಮೆದುರು ನಿಲ್ಲಿಸಿದ್ದಾರೆ -ಅದು ಮಾತಿನ ಎಲ್ಲ ಮಹಿಮೆಗಳ ಮಿತಿಯನ್ನೂ ಹಾಗೆ ಮಿತಿಗಳನ್ನು ಮೀರಿದಾಗ ಪಡೆಯುವ ಸತ್ವವನ್ನೂ ಧ್ವನಿಸುತ್ತದೆ -ನಡೆ ಮತ್ತು ನುಡಿಗಳು ಒಂದಾಗದಿದ್ದರೆ ಶಿವ ಒಲಿಯುವುದಿಲ್ಲ ಎಂಬ ಮೌಲ್ಯವನ್ನು ನಮ್ಮೆದುರು ನಿಲ್ಲಿಸಿ.

ಶರಣರು ಸೂಚಿಸುವ ಪರಿಹಾರ ಮಾರ್ಗ-ನೀತಿಯ ಹಾಗೂ ಸದಾಚಾರದ ಅಸ್ತಿವಾರದ ಮೇಲೆ ದೃಢವಾಗಿ ನಿಂತದ್ದು.

ಇಂಥ ಆಚಾರವೇ ಅಸ್ತಿವಾರವಾದ ಆ ದೃಷ್ಟಿಗೆ ಸಹಜವಾಗಿಯೆ ಮಾನವ ದೌರ್ಬಲ್ಯಗಳೂ ಎದುರಾದವು. ಮಾನವ ತನ್ನ ಸ್ವಾರ್ಥದಿಂದಾಗಿ ರೂಪಿಸಿದ ಸಾಮಾಜಿಕ ಕಟ್ಟುಪಾಡುಗಳೂ ಎದುರಾದವು. ಅಷ್ಟೇ ಅಲ್ಲ ಭ್ರಮೆ ಹುಟ್ಟಿಸಿದ ಮೂಢನಂಬಿಕೆಗಳ ನಿರರ್ಥಕತೆಗಳೂ ಮನವರಿಕೆಯಾದುವು.

ಆದ್ದರಿಂದಲೇ ಅವರು ಸೂಚಿಸುವ ಪರಿಹಾರಗಳು ಅನಂತಮುಖವಾದುವು. ಅವು ಬದುಕನ್ನು ಅರ್ಥಪೂರ್ಣವೂ ಆನಂದಮಯವೂ ಮತ್ತು ದೇವಸಮ್ಮತವೂ ಆಗುವಂತೆ ಮಾಡಿದವು. ಹಾಗೆ ಪರಿಹಾರಗಳನ್ನು ಸೂಚಿಸುವಾಗ ಅವರೆಂದೂ ಬದುಕಿನ ವಾಸ್ತವವನ್ನು ನಿರ್ಲಕ್ಷಿಸಲಿಲ್ಲ. ಅಂಥ ಭಯಾನಕ ಎನ್ನಿಸುವ ವಾಸ್ತವದ ಅರಿವು ಅವರಿಗಿದ್ದುದರಿಂದಲೇ ಅವರು ಪರಿಹಾರಗಳನ್ನು ಕಂಡುಕೊಳ್ಳುವ ಹಾದಿಯೂ ಅರ್ಥಪೂರ್ಣವಾಗಿದ್ದುದು. ಅವರು ಈ ನೆಲದ ಬದುಕಿನಲ್ಲಿ ರಕ್ತಮಾಂಸ ಸಮೇತ ಬದುಕಿದ ವಾಸ್ತವವಾದಿಗಳಾಗಿದ್ದರೆಂಬುದನ್ನು ನಾವು ಮರೆಯದಿರೋಣ. ಈ ವಚನವನ್ನು ಗಮನಿಸಿ:

**ಒಡಲುಗೊಂಡವ ಹಸಿವ, ಒಡಲುಗೊಂಡವ ಹುಸಿವ**
**ಒಡಲುಗೊಂಡವನೆಂದು ನೀನೆನ್ನ ಕೆಡೆನುಡಿಯದಿರಾ**
**ನೀನೆನ್ನಂತೊಮ್ಮೆ ಒಡಲುಗೊಂಡು ನೋಡಾ ರಾಮನಾಥಾ!**

ತನ್ನ ಇಷ್ಟದೈವಕ್ಕೇ ಸವಾಲೆಸೆಯುವ ಜೇಡರ ದಾಸಿಮಯ್ಯನ ವಚನ ನಮ್ಮೆದುರು ನಿಲ್ಲಿಸುವ ಚಿತ್ರ ಅಸಾಮಾನ್ಯವಾದದ್ದು. ಈ ವಚನದ ಅರ್ಥಸಾಧ್ಯತೆಯೂ ಬಹುಮುಖ್ಯವಾದುದು. ದೌರ್ಬಲ್ಯಗಳು ಈ ದೇಹದಿಂದಾಗಿಯೇ ಬರುವುದು; ಆದರೆ ಇವುಗಳನ್ನು ಗೆಲ್ಲಬೇಕೆ ಹೊರತು, ದೇಹವನ್ನು ನಿಂದಿಸಬಾರದು. ಏಕೆಂದರೆ ಈ ದೇಹವೇ ಇಲ್ಲದೆ ಬೇರೆ ಸಾಧನೆಗಳು ಎಲ್ಲಿಂದ ಸಾಧ್ಯ ಹೇಳಿ! ಘಟವನೊಡೆದು ಬಯಲ ಬೆರಸಲದೇಕೆ? ಘಟದೊಳಗಿಪ್ಪುದೆ ಬಯಲೆಂದರಿದೊಡೆ ಸಾಲದೆ? ಎಂಬ ಆತನ ಪ್ರಶ್ನೆಯಲ್ಲಿ ಉತ್ತರವೂ ಅಡಗಿದೆ. ಶರಣರು ದೌರ್ಬಲ್ಯಗಳನ್ನು ಗುರುತಿಸಿದರು; ಅವುಗಳ ನಿವಾರಣೆಗೆ ಪ್ರಯತ್ನಿಸಿದರು; ಅವುಗಳನ್ನು ಗೆದ್ದು ಜೀವ-ದೇವ ಆಗುವುದು ಹೇಗೆ ಎಂಬುದನ್ನು ಅನ್ವೇಷಿಸಿ ಮಾರ್ಗದರ್ಶನ ಮಾಡಿದರು.

ವಿಸ್ತಾರ ಭಯದಿಂದ ಪ್ರಧಾನವಾದ ಕೆಲವು ಪರಿಹಾರ ಕ್ರಮ ಚಿಂತನೆಯನ್ನು ಮಾತ್ರ ಇಲ್ಲಿ ಸೂಚಿಸುತ್ತಿದ್ದೇನೆ.

ವ್ಯಾಸ ಬೋಯಿತಿಯ ಮಗ,
ಮಾರ್ಕಂಡೇಯ ಮಾತಂಗಿಯ ಮಗ,
ಮಂಡೋದರಿ ಕಪ್ಪೆಯ ಮಗಳು, ಕುಲವನರಸದಿರಿಂ ಭೋ!
ಕುಲದಿಂದ ಮುನ್ನೇನಾದಿರಿಂ ಭೋ!
ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮಚ್ಚಿಗ, ಕಶ್ಯಪ ಕಮ್ಮಾರ
ಕೌಂಡಿನ್ಯನೆಂಬ ಋಷಿ ಮೂರು ಭುವನವರಿಯೆ ನಾವಿದ ಕಾಣಿಭೋ!
ನಮ್ಮ ಕೂಡಲಸಂಗನ ವಚನವಿಂತೆಂದುದು:
ಶ್ವಪಚೋಪಿಯಾದಡೇನು, ಶಿವಭಕ್ತನೆ ಕುಲಜಂ ಭೋ!

ಬಸವಣ್ಣನ ಈ ವಚನ ಜಾತಿ ಹಾಗೂ ಅಸ್ಪೃಶ್ಯತೆಗಳ ಮೂಲವನ್ನೆ ಶೋಧಿಸಿ ಕಿತ್ತೆಸೆಯುವ ಪ್ರಯತ್ನ ಮಾಡುತ್ತದೆ. ಇದಕ್ಕೆ ಬಸವಣ್ಣ ಬಳಸಿಕೊಳ್ಳುವ ನಿದರ್ಶನಗಳು ಏಳು ಜನ ಮಹಾನುಭಾವರುಗಳನ್ನು ಕುರಿತವು. ಅವರಲ್ಲಿ ಮೊದಲನೆಯವನು ಮಹಾಭಾರತದ ಮಹಾಕವಿಯಾದ ವ್ಯಾಸಋಷಿ, ಇನ್ನುಳಿದವರು ತಮ್ಮ ವೈಯಕ್ತಿಕ ಸಿದ್ಧಿಗಳಿಂದ ಲೋಕವಿಖ್ಯಾತರಾದವರು. ಇವರ ನಿದರ್ಶನಗಳಿಂದ ಬಸವಣ್ಣ ಹುಟ್ಟಿದ ಮನೆ ಮುಖ್ಯವಲ್ಲ; ಹುಟ್ಟಿದ ಮನುಷ್ಯ ಬದುಕಿನಲ್ಲಿ ಸಾಧಿಸಿದ್ದು ಮುಖ್ಯ ಎಂಬುದನ್ನು ಧ್ವನಿಸಿ ವ್ಯಕ್ತಿಯನ್ನು ಅವನ ಯೋಗ್ಯತೆಯಿಂದ ಮಾತ್ರ ಅಳೆಯಬೇಕೆನ್ನುತ್ತಾನೆ. ಅಷ್ಟೇ ಅಲ್ಲ, ಸಂಪ್ರದಾಯ ಜಡವಾಗಿ ಬಂದ ಜಾತಿ ಮತ್ತು ಅಸ್ಪೃಶ್ಯತೆಗಳು ಕೇವಲ ಮಾನವ ನಿರ್ಮಿತವೆಂದೂ ಅವುಗಳಿಂದ ಮನುಷ್ಯನ ನಿಜವಾದ ಯೋಗ್ಯತೆಯನ್ನು ತಿಳಿಯುವುದಕ್ಕೆ ಸಾಧ್ಯವಾಗುವುದಿಲ್ಲವೆಂದೂ ಸೂಚಿಸುತ್ತವೆ. ವಾಸ್ತವವಾಗಿ ವ್ಯವಹಾರ ಮಾಡುವವನು ಸೆಟ್ಟಿಯೆನಿಸಿಕೊಳ್ಳುತ್ತಾನೆ; ಬಟ್ಟೆಯನ್ನು ಶುಚಿಮಾಡುವವನು ಮಡಿವಾಳನೆನಿಸಿಕೊಳ್ಳುತ್ತಾನೆ; ಅಷ್ಟೆ. ಈ ದೃಷ್ಟಿಯಿಂದ, ವೃತ್ತಿಯಿಂದ ಯಾರ ಯೋಗ್ಯತೆಯನ್ನೂ ಅಳೆಯಲು ಹೋಗಬಾರದು, ವ್ಯಕ್ತಿತ್ವದ ಘನತೆಯಿಂದ ಮಾತ್ರ ಅದನ್ನು ಗ್ರಹಿಸಬೇಕು.

ಶರಣರು, ಮೂಢನಂಬಿಕೆಗಳು ಮನುಷ್ಯನ ಶಕ್ತಿ, ಸಾಮರ್ಥ್ಯಗಳನ್ನು ಮುಸಕು ಮಾಡುತ್ತವೆಂಬುದನ್ನು ಗ್ರಹಿಸಿದ್ದರು. ಆದ್ದರಿಂದಲೇ ಅವರು ಹನ್ನೆರಡನೆಯ ಶತಮಾನದಷ್ಟು ಹಿಂದೆಯೇ ರಾಹುಕಾಲ, ಗುಳಿಕಕಾಲ, ಶುಭಘಳಿಗೆ, ಅಶುಭಘಳಿಗೆ ಎಂಬ ಮೂಢನಂಬಿಕೆಗಳನ್ನು ದೂರಮಾಡಲು ಕರೆಯಿತ್ತರು.

**ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ**
**ರಾಶಿಕೂಟ ಗಣಸಂಬಂಧ ಬಂತೆಂದು ಹೇಳಿರಯ್ಯ**
**ನಾಳಿನ ದಿನಕ್ಕಿಂದಿನ ದಿನ ಲೇಸೆಂದು ಹೇಳಿರಯ್ಯ**
**ಕೂಡಲಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯ.**

ಇಪ್ಪತ್ತೊಂದನೆಯ ಶತಮಾನಕ್ಕೆ ಕಾಲಿರಿಸಿದ ಈ ಸಂದರ್ಭದಲ್ಲೂ, ವಿಜ್ಞಾನಿಗಳು ಉಪಗ್ರಹ ಉಡಾವಣೆಯಂಥ ಪ್ರಮುಖ ಕಾರ್ಯಗಳನ್ನು ಆರಂಭಿಸಲು, ರಾಹುಕಾಲ ಗುಳಿಕಕಾಲಗಳ ಲೆಕ್ಕ ಹಾಕುತ್ತ ಕೂಡುವ ಮೌಢ್ಯವನ್ನು ಕಾಣುತ್ತಿದ್ದೇವೆ. ರಾಹುಕಾಲವೆಂದರೆ ನಾವು ಆರಂಭಿಸುವ ಕಾರ್ಯಕ್ಕೆ ತೊಡಕು ಹಾಕಲು ಗ್ರಹವೊಂದು ಕಾದು ಕುಳಿತಿದೆ ಎಂದು ಹೆದರುತ್ತೇವೆ. ಬೆಕ್ಕು ಅಡ್ಡ ಬಂದರೆ ಅಪಶಕುನವಾಯಿತೆಂದು ಭ್ರಮಿಸುತ್ತೇವೆ. ಇಂಥ ನಂಬಿಕೆಗಳೆಲ್ಲ ಮನುಷ್ಯನ ಕ್ರಿಯಾಶಾಲಿತ್ವಕ್ಕೆ ಆತಂಕವುಂಟು ಮಾಡುವ ಅಪಾಯಗಳು ಎಂದು ಶರಣರು ಸ್ಪಷ್ಟವಾಗಿ ಸಾರಿದರು.





ಶರಣರು ಆಷಾಢಭೂತಿಯನ್ನು ಎಂದೂ ಒಪ್ಪಲಿಲ್ಲ.

**ಕಲ್ಲನಾಗರ ಕಂಡರೆ ಹಾಲನೆರೆಯೆಂಬರು**
**ದಿಟದ ನಾಗರ ಕಂಡರೆ ಕೊಲ್ಲು ಕೊಲ್ಲೆಂಬರಯ್ಯ**
**ಉಂಬ ಜಂಗಮ ಬಂದಡೆ ನಡೆಯೆಂಬರು**
**ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ...**

ಮೇಲಿನ ಮಾತುಗಳನ್ನು ಗಮನಿಸಿ, ಅದರಲ್ಲಿಯೂ ಉಣ್ಣದ ಲಿಂಗಕ್ಕೆ ನೈವೇದ್ಯ ಮಾಡಿಬರುವ ಈ ಆಷಾಢಭೂತಿಗಳು ಮೂಢರೂ ಹೌದು; ಹಸಿದ ಜಂಗಮ ಎದುರಾದಾಗ ಅವನಿಗೆ ಒಂದಗುಳು ಅನ್ನವನ್ನೂ ನೀಡದವರು. ಇಂಥ ಆಷಾಢಭೂತಿತನ ಬದುಕಿನ ಮಾರಕ ಎಂದು ಶರಣರು ಬೋಧಿಸಿದರು. ಶರಣರು ಬೋಧಿಸಿದ ಧರ್ಮ ದಯೆಯೆ ಧರ್ಮ.

**ದಯವಿಲ್ಲದ ಧರ್ಮವದೇವುದಯ್ಯಾ**
**ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ**
**ದಯವೇ ಧರ್ಮದ ಮೂಲವಯ್ಯ**
**ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.**

ಮೇಲಿನ ಮಾತುಗಳಲ್ಲಿರುವ ಸತ್ಯ ಮಹತ್ವದ್ದು. ವಿಶ್ವದ ಯಾವುದೇ ಧರ್ಮವಾಗಲಿ, ಅದು ಕ್ರೈಸ್ತ ಧರ್ಮವಾಗಬಹುದು; ಇಸ್ಲಾಂ ಆಗಬಹುದು; ಬೌದ್ಧ ಆಗಬಹುದು; ಜೈನ ಆಗಬಹುದು ಅಥವಾ ಮತ್ತಾವುದೇ ಆಗಬಹುದು. ದಯವಿಲ್ಲದ ಧರ್ಮ ವಿಶ್ವದಲ್ಲಿ ಯಾವುದಿದೆ ಹೇಳಿ? ಶರಣರು ಈ ದಯೆಯನ್ನು ಕೇವಲ ಮಾನವ ವರ್ಗಕ್ಕೆ ಮಾತ್ರ ಸೀಮಿತಗೊಳಿಸಲಿಲ್ಲ. ಸಮಸ್ತ ಪ್ರಾಣಿಗಳಲ್ಲಿಯೂ ದಯೆ ಮತ್ತು ಪ್ರೀತಿಗಳಿರಬೇಕು ಎಂದು ಬೋಧಿಸಿದರು. ಆಚಾರದ ಅಸ್ತಿವಾರದ ಮೇಲೆ ನಿಂತ ಶರಣಧರ್ಮದ ಮಂತ್ರ ದಯೆ. ಸಕಲ ಪ್ರಾಣಿಗಳಲ್ಲಿಯೂ ದಯೆ ಇರಬೇಕು ಎಂದಾಗ ಅದು ವಿಶ್ವಧರ್ಮವಾಗಿ ವಿಕಾಸವಾಗುತ್ತದೆ.

ಈ ಶರಣರ ಧರ್ಮ ಕೇವಲ ಪರಿಹಾರಗಳನ್ನು ಸೂಚಿಸಲು ಪ್ರಯತ್ನಿಸಲಿಲ್ಲ; ಭೂಮಿಯ ಮೇಲಣ ಬದುಕನ್ನು ಕೈಲಾಸಮಯವಾಗಿ ಮಾಡಲು ಹೆಣಗಿತು. ಆದ್ದರಿಂದಲೆ ಅವರು ಸ್ವರ್ಗ ನರಕಗಳನ್ನು, ಸತ್ತ ಮೇಲೆ ಕಾಣಬಹುದಾದ ಲೋಕವಾಗಿ ಹೇಳಲಿಲ್ಲ. ಆಚಾರವೇ ಸ್ವರ್ಗ ಎಂದರು, ಅನಾಚಾರವೆ ನರಕ ಎಂದರು. ಸತ್ಯವನ್ನು ನುಡಿಯುವುದೆ ದೇವಲೋಕ ಎಂದರು; ಮಿಥ್ಯವನ್ನು ನುಡಿಯುವುದೆ ಮರ್ತ್ಯಲೋಕ ಎಂದರು. ಇನ್ನೂ ಮುಂದುವರಿದು ಅವರು ಮನುಷ್ಯನ ಸಜ್ಜನಿಕೆಯ ಬಗೆಗೂ ಚಿಂತಿಸಿದರು. ಯಾರಾದರೂ ಎದುರಾದರೆ ಅವರನ್ನು ಪ್ರೀತಿ ಗೌರವಗಳಿಂದ ಕಾಣಿರಿ ಎಂದರು:

**ಏನು ಬಂದಿರಿ, ಹದುಳಿದ್ದಿರೆ ಎಂದಡೆ**
**ನಿಮ್ಮೈಸಿರಿ ಹಾರಿ ಹೋಹುದೆ?**
**ಕುಳ್ಳಿರೆಂದಡೆ ನೆಲ ಕುಳಿ ಹೋಹುದೆ?**
**ಒಡನೆ ನುಡಿದಡೆ ಸಿರ ಹೊಟ್ಟೆಯೊಡೆವುದೆ?**
**ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿದ್ದಡೆ**
**ಮೂಗ ಕೊಯ್ವುದ ಮಾಬನೆ ಕೂಡಲಸಂಗಮದೇವಯ್ಯ.**

ಎಂದು ಹೇಳುವಲ್ಲಿನ ಮಾತಿನ ತೀಕ್ಷ್ಣತೆಯನ್ನು ಗಮನಿಸಬೇಕು. ಆ ತೀಕ್ಷ್ಣತೆಯ ಹಿಂದಿರುವುದು ಸಜ್ಜನಿಕೆ ಅತ್ಯಗತ್ಯ ಎಂಬ ಸೂಚನೆ. ಅಂಥ ಸಜ್ಜನಿಕೆ ಇಲ್ಲದಿದ್ದರೆ ಬದುಕು ಸಹ್ಯವಾಗುವುದಿಲ್ಲ ಎಂಬ ಸೂಚನೆ.

ಹೀಗೆ ಶರಣರು ಹನ್ನೆರಡನೆಯ ಶತಮಾನದಲ್ಲಿ ಅಂದಿನ ಸಮಾಜದಲ್ಲಿದ್ದ ಮೂಢನಂಬಿಕೆ, ಆಷಾಢಭೂತಿತನ, ಮೌಢ್ಯ, ಜಾತೀಯತೆ, ಅಸ್ಪೃಶ್ಯತೆ ಮೊದಲಾದ ಮಾನವ ವಿರೋಧಿ ಭಾವನೆಗಳನ್ನು ದೂರಮಾಡಿ ಈ ಲೋಕವನ್ನೆ ಕೈಲಾಸವನ್ನಾಗಿ ಮಾಡುವ, ಜೀವನನ್ನು ದೇವನಾಗಿ ಮಾಡುವ ಮಹಾಸಂಕಲ್ಪದಿಂದ ಕಣಸಿದರು; ಹೊಸ ಸಮಾಜವನ್ನು ಕಟ್ಟಿದರು; ಮಾನವ ಮೌಲ್ಯಗಳನ್ನು ಮನಗಾಣಿಸಿ ಅವು ಬದುಕಿಗೆ ಅಗತ್ಯವಾದ ಗುಣಗಳು ಎಂಬುದನ್ನು ಸಾರಿದರು.

ಇಲ್ಲಿ ಬಳಕೆಯಾಗಿರುವ ವಚನಕಾರರ ಹೆಸರುಗಳನ್ನು ಗಮನಿಸಿದರೆ ಅರಿವಾಗುತ್ತದೆ, ಶರಣರೆಲ್ಲ ದನಿಗೂಡಿಸಿದ ಅನ್ವೇಷಣೆ ಅಂದಿನದು. ಮತ್ತೆ ಆ ಶರಣರು ಯಾವ ಜಾತಿಗೂ ಸೇರಿದವರಲ್ಲ; **'ಅರಿದು'** ಶರಣರಾದವರು. ತಾವು ಮೊದಲು ಮೌಲ್ಯಗಳನ್ನು ಕಂಡುಕೊಂಡು ಅವುಗಳನ್ನು ಆಚರಿಸಲು ದುಡಿದವರು.

*(ಸೌಜನ್ಯ : ಬೆಳಕಿನ ಹೆಜ್ಜೆಗಳು)*

## ಶ್ರೀವಾಣಿ

ಕಾಯಕದಿಂದ ತನು ಶುಚಿಯಾಗುತ್ತದೆ. ಅನಗತ್ಯವಾಗಿ ಸಂಗ್ರಹವಾದ ನಂಜೆಲ್ಲವೂ ಬೆವರಿನ ರೂಪದಲ್ಲಿ ಹರಿದು ಹೋಗುತ್ತದೆ. ಬೊಜ್ಜು ಕರಗುತ್ತದೆ. ತನು ಸಪುರವಾಗುತ್ತದೆ. ಸುಂದರ ಸಿರಿಯಾಗುತ್ತದೆ. ಕಾಯಕದಿಂದ ಮನ ಶುದ್ಧವಾಗುತ್ತದೆ. ಲೋಭ ಪ್ರಲೋಭನೆಗಳು ದೂರವಾಗುತ್ತವೆ. ಭಾವ ಶಿವಮುಖವಾಗುತ್ತದೆ.

* * *

ಇಂದು ಗುಣಮಟ್ಟ ಎಲ್ಲ ಕ್ಷೇತ್ರಗಳಲ್ಲಿಯೂ ಇಳಿಮುಖವಾಗಿದೆ. ಶಿಕ್ಷಣ, ಕೃಷಿ, ವ್ಯಾಪಾರ, ಕೈಗಾರಿಕೆ, ವೈದ್ಯ, ಸಾರಿಗೆ, ಪಶುಪಾಲನೆ, ನೈರ್ಮಲ್ಯ, ಕಟ್ಟಡ ನಿರ್ಮಾಣ, ರಸ್ತೆ ವ್ಯವಸ್ಥೆ, ಒಳಚರಂಡಿ ಯೋಜನೆ, ಎಲ್ಲದರಲ್ಲೂ ಕಳಪೆತನ ಕಾಣುತ್ತಿದೆ. ಕರ್ತವ್ಯಶುದ್ಧಿ ಕಾಣುತ್ತಿಲ್ಲ. ಇದು ದೇವರೊಪ್ಪುವ ಮಾರ್ಗವಲ್ಲ.



# ಕನ್ನಡ ಸಾರಸ್ವತ ಲೋಕದ ರಾಯಭಾರಿ
# ಡಾ. ದೇ. ಜವರೇಗೌಡರು

- ಎಚ್.ಎಸ್. ಸಿದ್ಧಗಂಗಪ್ಪ *

ಕನ್ನಡ ಸಾರಸ್ವತ ಲೋಕದಲ್ಲಿ 'ದೇಜೇಗೌ' ಎಂದು ಜನಪ್ರಿಯರಾದ ಡಾ. ದೇ. ಜವರೇಗೌಡರು ನಾಡು ನುಡಿಯ ಬಗ್ಗೆ ಅಪಾರವಾದ ಅಭಿಮಾನ, ಕಳಕಳಿಯನ್ನು ಹೊಂದಿದ್ದರು. ನಾಡು, ನುಡಿ, ಜಲದ ಬಗ್ಗೆ ಸಮಸ್ಯೆಗಳು ಎದುರಾದಾಗ ಅವರ ರಕ್ಷಣೆಗಾಗಿ ಪ್ರತಿಭಟನೆಯ ಮುಂಚೂಣಿ ಸ್ಥಾನದಲ್ಲಿದ್ದು, ಕನ್ನಡಾಭಿಮಾನಿಗಳಲ್ಲಿ ಸ್ವಾಭಿಮಾನದ ಕೆಚ್ಚನ್ನು ತುಂಬಿದ ಒಬ್ಬ ನಿಷ್ಠಾವಂತ, ಶ್ರದ್ಧಾವಂತ ಕನ್ನಡಾಭಿಮಾನಿ. ಕನ್ನಡ ಮಾಧ್ಯಮದ ಬಗ್ಗೆ, ಕಾವೇರಿ ಜಲವಿವಾದ ಬಗ್ಗೆ, ಕನ್ನಡ ಶಾಲೆಗಳ ದುಸ್ಥಿತಿಯ ಬಗ್ಗೆ, ಕನ್ನಡ ಶಾಸ್ತ್ರೀಯ ಭಾಷೆಯ ಬಗ್ಗೆ ದನಿ ಎತ್ತುತ್ತಿದ್ದ ಧೀಮಂತ ವ್ಯಕ್ತಿತ್ವದ ಕನ್ನಡ ಪ್ರೇಮಿ. ಒಂದು ಕಡೆ ಅವರೇ *"ಕೆಲವರಿಗೆ ರಾಮನಿಂದ ಮುಕ್ತಿ, ನನಗೆ ಕನ್ನಡದಿಂದಲೇ ಮುಕ್ತಿ'* ಎಂದು ಹೇಳಿರುವುದು ಅವರ ಕನ್ನಡ ಪ್ರೇಮದ ದ್ಯೋತಕ.



ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಕನ್ನಡಕ್ಕೆ ಮೊಟ್ಟಮೊದಲ ಬಾರಿಗೆ 'ಜ್ಞಾನಪೀಠ' ಪ್ರಶಸ್ತಿಯನ್ನು ತಂದುಕೊಟ್ಟ ರಾಷ್ಟ್ರಕವಿ ಡಾ. ಕುವೆಂಪು ಅವರ ನೆಚ್ಚಿನ ಅಂತರಂಗದ ಶಿಷ್ಯರಾಗಿ, ಅವರ ಆದರ್ಶ, ಮಾನವೀಯ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು, ಮುನ್ನಡೆಯುತ್ತಾ ಬಂದರು. ಒಬ್ಬ ಪ್ರಜ್ಞಾವಂತ ಕನ್ನಡಿಗನಾಗಿ, ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಕುಲಪತಿಗಳಾಗಿ, ಲೇಖಕರಾಗಿ, ಸಂಶೋಧಕರಾಗಿ, ಮಾರ್ಗದರ್ಶಕರಾಗಿ ಡಾ. ದೇಜಗೌ ಅವರು ಮಾಡಿದ ಸಾಧನೆ ಅನನ್ಯ, ಅನುಪಮವಾದುದು. ಸದಾ ಒಂದಿಲ್ಲೊಂದು ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು, ಕ್ರಿಯಾಶೀಲತೆಯನ್ನು ಕೊನೆಯ ವರಿಗೂ ಉಳಿಸಿಕೊಂಡು ಬೆಳೆಸಿಕೊಂಡು ಬಂದರು. ದಿಟ್ಟತನಕ್ಕೆ ನೇರನುಡಿಗೆ ಮತ್ತೊಂದು ಹೆಸರು 'ಡಾ. ದೇಜಗೌ' ಎಂದರೆ ಅತಿಶಯೋಕ್ತಿಯಾಗಲಾರದು. ಅವರನ್ನು ಹತ್ತಿರದಿಂದ ಬಲ್ಲವರೆಲ್ಲರೂ ನನ್ನ ಈ ಮಾತನ್ನು ಅನುಮೋದಿಸುತ್ತಾರೆ. ಅಂತರಂಗ ಹಾಗೂ ಬಹಿರಂಗಗಳೆರಡರಲ್ಲೂ ಪರಿಶುದ್ಧತೆಯನ್ನು ಕಾಪಾಡಿ ಕೊಂಡು ಬಂದು ಬಸವಣ್ಣನವರ ಅನುಯಾಯಿಗಳು, ಬುದ್ಧ, ಅಂಬೇಡ್ಕರ್ ಬಗ್ಗೆ ಅಪಾರವಾದ ಅಭಿಮಾನ ಗೌರವ ಇಟ್ಟುಕೊಂಡಿದ್ದರು.

**ಜನನ :** ಜುಲೈ ೬, ೧೯೧೮, ಹುಟ್ಟಿದ ಊರು ರಾಮನಗರ ಜಿಲ್ಲೆ, ಚನ್ನಪಟ್ಟಣ ತಾಲ್ಲೂಕಿನ ಚಕ್ಕರೆ, ಹಡೆದ ಪುಣ್ಯಜೀವಿಗಳು ತಂದೆ ಶ್ರೀ ದೇವೇಗೌಡ, ತಾಯಿ ಶ್ರೀಮತಿ ಚನ್ನಮ್ಮ. ಕೃಷಿಕ ಕುಟುಂಬ. ಮಳೆಯಾದರೆ ಬೆಳೆ, ಇಲ್ಲದೆ ಹೋದರೆ ಬಿತ್ತಿದ ಬೀಜವೂ ಹಾಳು, ಬಡತನವನ್ನೇ ಹಾಸಿ ಹೊದ್ದ ಕುಟುಂಬ.

**ಶಿಕ್ಷಣ :** ಕಿತ್ತು ತಿನ್ನುತ್ತಿದ್ದ ಬಡತನವಿದ್ದರೂ, ಓದಬೇಕೆಂಬ ಹಂಬಲ ಬಾಲಕ ಜವರೇಗೌಡರಲ್ಲಿ ತೀವ್ರವಾಗಿತ್ತು. ಅಡ್ಡವಾಗಿದ್ದ ಬಡತನವನ್ನು ಮೆಟ್ಟಿ ನಿಂತು ಹುಟ್ಟಿದೂರಿನಲ್ಲಿ, ರಾಮನಗರ, ಬೆಂಗಳೂರಿನಲ್ಲಿ ಬಿ.ಎ. ಪದವಿಯನ್ನು ಪಡೆದು ನಂತರ ಕುವೆಂಪು ಅವರಿಂದ ಪ್ರಭಾವಿತರಾಗಿ ೧೯೪೩ರಲ್ಲಿ ಮೈಸೂರಿನಲ್ಲಿ ಕನ್ನಡ ಸ್ನಾತಕೋತ್ತರ ಪದವಿ ಪಡೆದರು.

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧



ಪರಿಚಯ



ಏಪ್ರಿಲ್ ೨೮, ೨೦೧೨ ರಂದು ನಡೆದ ಗುರುವಂದನಾ ಸಮಾರಂಭದಲ್ಲಿ ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಮತ್ತು ಹಿತೈಷಿಗಳ ಸಂಘದ ವತಿಯಿಂದ ಕೊಡಮಾಡುವ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಕರ್ನಾಟಕ ರತ್ನ, ನಾಡೋಜ ಡಾ॥ ದೇ. ಜವರೇಗೌಡರಿಗೆ ಪರಮಪೂಜ್ಯ ಶ್ರೀ ಶ್ರೀಗಳವರು ಪ್ರದಾನ ಮಾಡಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಜಪಾನಂದ ಮಹಾಸ್ವಾಮಿಗಳು, ಪೂಜ್ಯ ಶ್ರೀ ಜಗದ್ಗುರು ಶ್ರೀ ಶ್ರೀ ಪಂಚಮಶಿವಲಿಂಗೇಶ್ವರ ಮಹಾಸ್ವಾಮಿಗಳು ಹಾಗೂ ಹಳೆಯ ವಿದ್ಯಾರ್ಥಿಗಳ ಮತ್ತು ಹಿತೈಷಿಗಳ ಸಂಘದ ಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯ ಅವರು ಉಪಸ್ಥಿತರಿದ್ದರು

**ವೃತ್ತಿಜೀವನ :** ಕನ್ನಡ ವಿ.ವಿ. ಪದವಿ ಪಡೆದ ನಂತರ ರಾಜ್ಯ ಸಚಿವಾಲಯದಲ್ಲಿ ಗುಮಾಸ್ತರಾಗಿ ವೃತ್ತಿ ಜೀವನವನ್ನು ಆರಂಭಿಸಿದರು, ಅವರು ಆಸಕ್ತಿ ಹವ್ಯಾಸಗಳಿಗೆ ಗುಮಾಸ್ತ ಹುದ್ದೆ ಅವರಿಗೆ ಸರಿಬರಲಿಲ್ಲ. ಹುದ್ದೆಗೆ ವಿದಾಯ ಹೇಳಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗದಲ್ಲಿ ಉಪನ್ಯಾಸಕರಾಗಿ ಪ್ರಕಟಣಾ ವಿಭಾಗದ ಕಾರ್ಯದರ್ಶಿಯಾಗಿ, ಸಹಾಯಕ ಪ್ರಾಧ್ಯಾಪಕರಾಗಿ, ಪರೀಕ್ಷೆಗಳ ನಿಯಂತ್ರಣಾಧಿಕಾರಿಯಾಗಿ, ಪ್ರಾಧಾಪಕರಾಗಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ, ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ ದಕ್ಷತೆಯಿಂದ ಕಾರ್ಯನಿರ್ವಹಿಸಿದರು. ೧೯೮೦ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿ, ಅವರ ಸೇವಾವಧಿಯಲ್ಲಿ ಮಾಡಿದ ಕಾರ್ಯಗಳು ಚಾರಿತ್ರಿಕ ದಾಖಲೆಗಳು.

ಗ್ರಾಮೀಣ ಪರಿಸರದಿಂದ ಬಂದ ದೇಜಗೌ ಅವರಿಗೆ ಜಾನಪದದ ಬಗ್ಗೆ ಅಪಾರ ಆಸಕ್ತಿ, ಜಾನಪದ ಸಂಸ್ಕೃತಿಯನ್ನು ಉಳಿಸಿ ಬೆಳೆಸಬೇಕೆಂಬ ಬದ್ಧತೆ, ಕಳಕಳಿಯಿಂದ ಮೈಸೂರು ವಿಶ್ವವಿದ್ಯಾಲಯದಲ್ಲಿ 'ಜಾನಪದ'ವನ್ನು ಎಂ.ಎ. ತರಗತಿಗಳಿಗೆ ಬೋಧನಾ ವಿಷಯವಾಗಿ ಮಾಡಿದರು. ಕನ್ನಡ ಅಧ್ಯಯನ ಸಂಸ್ಥೆಯಲ್ಲಿ 'ಜಾನಪದ ವಸ್ತು ಸಂಗ್ರಹಾಲಯ'ದ ಸ್ಥಾಪನೆಗೆ ಕಾರಣರಾದರು. ಕರ್ನಾಟಕದಲ್ಲಿ ಮೊಟ್ಟ ಮೊದಲಿಗೆ ವಿಶ್ವವಿದ್ಯಾಲಯದಲ್ಲಿ 'ಜಾನಪದ ವಸ್ತು ಸಂಗ್ರಹಾಲಯ'ವನ್ನು ಸ್ಥಾಪಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗಾಗಿ ಹತ್ತಾರು ಮಹತ್ವದ ಯೋಜನೆಗಳನ್ನು ರೂಪಿಸಿ, ಅದಕ್ಕೆ ಅಗತ್ಯವಾದ ಸಂಪನ್ಮೂಲಗಳನ್ನೂ ಕ್ರೋಡೀಕರಿಸಿ, ಅವುಗಳನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಿದ ಹೆಗ್ಗಳಿಕೆ ಡಾ. ದೇಜಗೌ ಅವರದು.

ಡಾ. ದೇಜಗೌ ಅವರು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುವ ಸಂದರ್ಭದಲ್ಲಿ ಹಲವಾರು ಯೋಜನೆಗಳನ್ನು ಹಮ್ಮಿಕೊಂಡು




'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಸ್ವೀಕಾರ ಮಾಡಿದ ಡಾ॥ ದೇ. ಜವರೇಗೌಡ ಅವರಿಂದ ಕೃತಜ್ಞತಾ ನುಡಿ

ಅವುಗಳನ್ನು ಸಾಕಾರಗೊಳಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವು ಕನ್ನಡ ವಿಶ್ವಕೋಶ, ವಿಷಯ ವಿಶ್ವಕೋಶ-ಕರ್ನಾಟಕ, ಇಂಗ್ಲೀಷ್-ಕನ್ನಡ ನಿಘಂಟು, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಛಂದಸ್ಸಿನ ಇತಿಹಾಸ ಮುಂತಾದವು.

ಕನ್ನಡ ಪರ ಚಳುವಳಿಯಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದು, ಶ್ರೀಯುತರು ಕನ್ನಡ ಮಾಧ್ಯಮದ ಪರವಾಗಿ ತೆಗೆದುಕೊಂಡ ದಿಟ್ಟ, ನಿಲುವುಗಳು, ಲೋಕಸೇವಾ ಆಯೋಗದಂತಹ ಪರೀಕ್ಷೆಗಳಲ್ಲೂ ಕನ್ನಡಕ್ಕೆ ಸೂಕ್ತಸ್ಥಾನ ದೊರಕಿಸಿಕೊಡಲು ನಡೆಸಿದ ಹೋರಾಟ ಕನ್ನಡ ಸಾಂಸ್ಕೃತಿಕ ಲೋಕದಲ್ಲಿ ಮೈಲಿಗಲ್ಲುಗಳು.

**ವೈಚಾರಿಕ ಚಿಂತನೆ :** ಡಾ. ದೇಜಗೌ ಅವರು ಜೀವನದುದ್ದಕ್ಕೂ ತಾವು ನಂಬಿದ ಸಿದ್ಧಾಂತಗಳೊಂದಿಗೆ ಎಂದೂ ರಾಜಿ ಮಾಡಿಕೊಂಡವರಲ್ಲ. ಕುವೆಂಪು ಅವರ ವಿಚಾರಧಾರೆ, ವೈಚಾರಿಕ ಚಿಂತನೆಗಳು, ಧರ್ಮ, ದೇವರು, ಜಾತಿ, ಪಂಗಡ, ಮೌಢ್ಯತೆಯ ಬಗೆಗಿನ ನಿಲುವು ಅವರ ಮೇಲೆ ಅಪಾರವಾಗಿ ಪ್ರಭಾರ ಬೀರಿತ್ತು. ಅವರಿಗೆ ಗುರು ಕುವೆಂಪು ಎಂದರೆ ಅಪಾರ ಭಕ್ತಿ, ಪ್ರೀತಿ, ಗೌರವ. ಅವರದು ಅವಿನಾಭಾವ ಸಂಬಂಧ. ಕುವೆಂಪು ಅವರೇ ದೇಜಗೌ ಅವರನ್ನು **'ತಮ್ಮ ಜೀವನದ ಮಾರ್ಗದರ್ಶಕರು'** ಎಂದು ಒಂದು ಕಡೆ ಬರೆದುಕೊಂಡಿರುವುದನ್ನು ನೋಡಿದರೆ ಶಿಷ್ಯನ ಮೇಲೆ ಎಂಥ ಅಭಿಮಾನವಿತ್ತು ಎಂಬುದು ವ್ಯಕ್ತವಾಗುತ್ತದೆ.

**ಸಾಹಿತ್ಯ ಕೃಷಿ :** ಜಾನಪದ, ಸಾಹಿತ್ಯ, ಅನುವಾದ, ಹಳೆಗನ್ನಡ ಹೀಗೆ ಹಲವಾರು ಪ್ರಕಾರಗಳಲ್ಲಿ ೨೫೦ಕ್ಕೂ ಹೆಚ್ಚು ಮೌಲಿಕ ಗ್ರಂಥಗಳನ್ನು ನೀಡಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಸಾಂಕೇತಿಕವಾಗಿ ಕೆಲವನ್ನು ಹೆಸರಿಸುವುದಾದರೆ : ಬಸವೇಶ್ವರ-ಅಂಬೇಡ್ಕರ್, ಬಸವೇಶ್ವರ-ಕಾರ್ಲ್‌ಮಾರ್ಕ್ಸ್, ವಚನಗಳಲ್ಲಿ ಸಮಾಜವಾದ, ಶರಣಪಥ, ವಿಶ್ವ ಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ, ಬಸವ ದರ್ಶನ, ಬಸವ ಧರ್ಮ, ಬಸವ ಸಂಹಿತೆ, ಶಿವನಿಧಿ, ಬಸವಣ್ಣನವರ ಆದರ್ಶ ಮೌಲ್ಯಗಳಿಗೆ ಸಾಕ್ಷಿಗಳಾಗಿವೆ.

ನಯಸೇನನ ಧರ್ಮಾಮೃತ ಸಂಗ್ರಹ, ಲಕ್ಷ್ಮೀಶನ ಜೈಮುನೀ ಭಾರತ, ಕನಕದಾಸರ ನಳಚರಿತ್ರೆ, ಅಂಡಯ್ಯನ ಕಬ್ಬಿಗರ ಕಾವ, ಚಿಕ್ಕುಪಾಧ್ಯಾಯನ ರುಕ್ಮಾಂಗದ ಚರಿತ್ರೆ, ಇತ್ಯಾದಿ.



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೦೫ನೇ ಗುರುವಂದನಾ ಸಮಾರಂಭದಲ್ಲಿ ಡಾ. ದೇ. ಜವರೇಗೌಡ ಹಾಗೂ ಗಣ್ಯರು







ಪರಮಪೂಜ್ಯ ಶ್ರೀಗಳವರಿಗೆ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪನವರಿಂದ 'ಬಸವ ರಾಷ್ಟ್ರೀಯ ಪ್ರಶಸ್ತಿ' ಪ್ರದಾನ. ಈ ಸಂದರ್ಭದಲ್ಲಿ ಡಾ. ದೇ. ಜವರೇಗೌಡರು ಹಾಗೂ ಗಣ್ಯರು ಉಪಸ್ಥಿತರಿದ್ದರು

**ಜಾನಪದ :** ಜಾನಪದ ಅಧ್ಯಯನ, ಜಾನಪದ ಸೌಂದರ್ಯ, ಜಾನಪದ ವಾಹಿನಿ, ಜನಪದ ಗೀತಾಂಜಲಿ ಕೃತಿಗಳ ಮೂಲಕ ಜಾನಪದ ಬಗೆಗಿನ ತಮ್ಮ ಆಲೋಚನೆಗಳನ್ನು ದಾಖಲಿಸಿದ್ದಾರೆ. ಈ ಕೃತಿಗಳು ಜಾನಪದ ಅಧ್ಯಯನ ಮಾಡುವವರಿಗೆ ದಾರಿ ದೀಪವಾಗಿದೆ.

**ಅನುವಾದಗಳು :** ಹಮ್ಮು ಮತ್ತು ಬಿಮ್ಮು, ನೆನಪು ಕಹಿಯಲ್ಲ, ಅನಾಕರೆನಿನಾ, ಯುದ್ಧ ಮತ್ತು ಶಾಂತಿ, ಪುನರುತ್ಥಾನ, ಸಾಹಿತಿಗಳ ಸಂಗದಲ್ಲಿ ಹೋರಾಟದ ಬದುಕು, ಮೋತಿಲಾಲ್ ನೆಹರೂ, ರಾಷ್ಟ್ರಕವಿ ಕುವೆಂಪು, ತೀನಂಶ್ರೀ, ರಾಮಾಯಣ ದರ್ಶನಂ, ವಚನ ಚಂದ್ರಿಕೆ, ಇತ್ಯಾದಿಗಳು.

**ಪಿ.ಹೆಚ್‌ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ :** ತಮ್ಮ ಬಿಡುವಿಲ್ಲದ ಕಾರ್ಯದ ಒತ್ತಡದಲ್ಲಿಯೂ ಬಿಡುವು ಮಾಡಿಕೊಂಡು ವಿದ್ಯಾರ್ಥಿಗಳು ಪಿ.ಹೆಚ್‌ಡಿ ಮಹಾಪ್ರಬಂಧವನ್ನು ರಚಿಸಲು ಮಾರ್ಗದರ್ಶನ ಮಾಡಿದ್ದಾರೆ. ಇದು ವಿದ್ಯಾರ್ಥಿಗಳ ಮೇಲಿನ ಪ್ರೀತಿ ಹಾಗೂ ತಾವು ಕಲಿತ ಅನುಭವದಿಂದ ಪಡೆದುಕೊಂಡ ವಿದ್ಯೆಯನ್ನು ಧಾರೆ ಎರೆಯುವ ಅವರ ಹೃದಯ ವೈಶ್ಯಾಲತೆ ಅಭಿಮಾನಪಡುವಂತಹದು. ಏಳು ಮಂದಿಗೆ ಮಾರ್ಗದರ್ಶಕರಾಗಿ ಸಂಶೋಧಕ ತಜ್ಞರನ್ನು ರೂಪಿಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಶ್ರೀಯುತರನ್ನು ಕುರಿತು ಡಾಕ್ಟರೇಟ್ ಪ್ರಬಂಧಗಳು ಬೆಳಕು ಕಂಡಿವೆ.

**ಗೌರವ :** ಡಾ. ದೇಜಗೌ ಅವರು ಜಾನಪದ, ಸಾಹಿತ್ಯ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಸಲ್ಲಿಸಿದ ಅನುಪಮ ಸೇವೆಯನ್ನು ಗುರುತಿಸಿ ಹಲವಾರು ಸಂಘ ಸಂಸ್ಥೆಗಳು ದೇಜಗೌ ಅವರ ಹೆಸರಿನಲ್ಲಿ ಅನೇಕ ಸಾಂಸ್ಕೃತಿಕ ಸಂಘಗಳನ್ನು, ಟ್ರಸ್ಟ್‌ಗಳನ್ನು ಆರಂಭಿಸಿ. ತನ್ಮೂಲಕ ಸಮಾಜಮುಖಿ ಸೇವೆಯನ್ನು ಸಲ್ಲಿಸುತ್ತಾ ಬಂದಿರುವುದು ಸಮಾಜ ಅವರ ಬಗ್ಗೆ ಇಟ್ಟಿರುವ ಪ್ರೀತಿ, ಗೌರವವನ್ನು ಸೂಚಿಸುತ್ತದೆ. ಅಖಿಲ ಭಾರತ ದೇಜಗೌ ಸಾಂಸ್ಕೃತಿಕ ಟ್ರಸ್ಟ್, ಮೈಸೂರು, ದೇಜಗೌ ಜ್ಞಾನವಾಹಿನಿ ಅಕಾಡೆಮಿ ಟ್ರಸ್ಟ್, ಮೈಸೂರು, ದೇಜಗೌ ಮಕ್ಕಳ ಶ್ರೇಯೋಭಿವೃದ್ಧಿ ಸಂಸ್ಥೆ, ಮೈಸೂರು, ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕ್ರಿಯಾತ್ಮಕವಾಗಿ ಕಾರ್ಯನಿರ್ವಹಿಸುತ್ತಿವೆ.

ಡಾ. ದೇಜಗೌ ಅವರನ್ನು ಕುರಿತು ಕನ್ನಡ ಕಲ್ಯಾಣಿ ಮೊದಲ್ಗೊಂಡು ೭೦ಕ್ಕೂ ಹೆಚ್ಚು ಮೌಲಿಕ ಕೃತಿಗಳು ಲೋಕಾರ್ಪಣೆಯಾಗಿವೆ ಎಂದರೆ ಅವರು ಸಾಹಿತ್ಯ, ಆಡಳಿತ ಕ್ಷೇತ್ರದಲ್ಲಿ ಮಾಡಿದ ಸಾಧನೆ, ವಿದ್ವತ್‌ನ ಪರಿಚಯವಾಗುತ್ತದೆ. 'ಗುಡಿಸಿಲಿನಿಂದ ಗಂಗೋತ್ರಿ' ಯವರೆಗೆ ನಡೆದು ಬಂದ 'ಅಂತಃಕರಣ' – ದೇಜಗೌ ವ್ಯಕ್ತಿ ಮತ್ತು ಸಾಹಿತ್ಯ, ರಸಷಷ್ಠಿ, ಎಪ್ಪತ್ತರ ಹೊಸ್ತಿಲಲ್ಲಿ, ಅಮೃತ ವರ್ಷ, ಅಪೂರ್ವ, ಪುಸ್ತಕ ಪ್ರಪಂಚ, ನಮ್ಮ ನಾಡೋಜ' ಅಭಿನಂದನ ಗ್ರಂಥಗಳು ಸಮರ್ಪಿತವಾಗಿವೆ.

**ವಿದೇಶ ಪ್ರವಾಸ :** 'ಕೋಶ ಓದಿ ನೋಡು, ದೇಶ ತಿರುಗಿ ನೋಡು' ಎಂಬ ಗಾದೆಯ ಮಾತನ್ನು ಸಂಪೂರ್ಣವಾಗಿ ಜೀವನದಲ್ಲಿ ಅಳವಡಿಸಿಕೊಂಡ ಶ್ರೀಯುತರು, ವಿದೇಶ ಪ್ರವಾಸ ಮಾಡುವುದರ ಮೂಲಕ ಅಲ್ಲಿನ ಜನಜೀವನ ಆಚಾರ-ವಿಚಾರ, ಸಂಸ್ಕೃತಿ, ಅಭಿವೃದ್ಧಿ ಕಾರ್ಯಗಳು ಇದೇ ಮೊದಲಾದ ವಿವರಗಳನ್ನು ತಿಳಿದುಕೊಳ್ಳುವುದರ ಮೂಲಕ ತಮ್ಮ ಅನುಭವ ಸಂಪತ್ತನ್ನು ಹೆಚ್ಚಿಸಿಕೊಂಡರು. ಹೋದ ಕಡೆಯಲ್ಲಿ ಕನ್ನಡ ಭಾಷೆ, ಕರ್ನಾಟಕ ಸಂಸ್ಕೃತಿಯ ಬಗ್ಗೆ ವಿದ್ವತಪೂರ್ಣ ಉಪನ್ಯಾಸ ನೀಡುವುದರ ಮೂಲಕ ಕನ್ನಡ ಸೇವೆಯನ್ನು ಮಾಡಿದರು. ಅಮೆರಿಕಾ, ಆಫ್ರಿಕಾ, ಆಸ್ಟ್ರೀಯ, ಜಪಾನ್, ಜರ್ಮನಿ, ಸ್ವೀಜರ್‌ಲ್ಯಾಂಡ್, ಇಟಲಿ, ಐರ್ಲೆಂಡ್, ಕೀನ್ಯಾ, ಬ್ರಿಟನ್, ಘಾನಾ,

ನೈಜೀರಿಯಾ, ಫ್ರಾನ್ಸ್, ಶ್ರೀಲಂಕಾ, ಸಿಂಗಪುರ ಮತ್ತು ಕೆನಡಾ ರಾಷ್ಟ್ರಗಳಲ್ಲಿ ಪ್ರವಾಸ ಮಾಡಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ.

**ಪ್ರಶಸ್ತಿ-ಗೌರವಗಳು :** ಸಾಹಿತ್ಯ ಹಾಗೂ ಆಡಳಿತ ಕ್ಷೇತ್ರದಲ್ಲಿ ಸಲ್ಲಿಸಿದ ಅಮೂಲ್ಯ ಸೇವೆಗಾಗಿ ಸಂದ ಪ್ರಶಸ್ತಿ, ಗೌರವಗಳು ಹಲವಾರು. ಅವರೆಂದೂ ಪ್ರಶಸ್ತಿಯ ಹಿಂದೆ ಬಿದ್ದವರಲ್ಲ. ಪ್ರಶಸ್ತಿಗಳೇ ಬೇಡವೆಂದರೂ ಒಂದರ ಹಿಂದೆ ಒಂದು ಅರಸುತ್ತಾ ಬಂದವು. ಅವೆಲ್ಲ ಒಂದಕ್ಕಿಂತ ಒಂದು ಪ್ರತಿಷ್ಠಿತ ಪ್ರಶಸ್ತಿಗಳೆ. ಯಾವುದೇ ಕ್ಷೇತ್ರದಲ್ಲಿ ಪ್ರಾಮಾಣಿಕವಾಗಿ ಸಾಧನೆ ಮಾಡಿದವರಿಗೆ ಪ್ರಶಸ್ತಿ, ಗೌರವ, ಕೀರ್ತಿ ಬೆನ್ನತ್ತಿ ಬರುತ್ತವೆ ಎಂಬುದಕ್ಕೆ ಡಾ. ದೇಜಗೌ ಅವರಿಗೆ ದೊರೆತಿರುವ ಪ್ರಶಸ್ತಿಗಳೇ ಸಾಕ್ಷಿ. ಪದ್ಮಶ್ರೀ ಪ್ರಶಸ್ತಿ, ರಾಜ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಸೋವಿಯತ್ ಲ್ಯಾಂಡ್ ನೆಹರು ಪ್ರಶಸ್ತಿ, ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಮೈಸೂರು ವಿಶ್ವವಿದ್ಯಾಲಯದ ಗೌರವ ಡಿ.ಲಿಟ್, ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ನಾಡೋಜ ಗೌರವ, ಪಂಪ ಪ್ರಶಸ್ತಿ, **'ಸಿದ್ಧಗಂಗಾ ಶ್ರೀ'** ಪ್ರಶಸ್ತಿ, ಚಿದಾನಂದ ಪ್ರಶಸ್ತಿ, ಬಸವಶ್ರೀ ಪ್ರಶಸ್ತಿ, ಅಲ್ಲಮಶ್ರೀ ಪ್ರಶಸ್ತಿ, ಜಚನಿ ವಿಚಾರ ಪ್ರಶಸ್ತಿ, ನೃಪತುಂಗ ಪ್ರಶಸ್ತಿ, ಕರ್ನಾಟಕ ರತ್ನ ಪ್ರಶಸ್ತಿ, ಮುಕ್ತ ವಿಶ್ವವಿದ್ಯಾಲಯದ ಗೌರವ ಡಿ.ಲಿಟ್ ಪ್ರಶಸ್ತಿ, ೧೯೭೦ ರಲ್ಲಿ ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ೪೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಗೌರವವೂ ಸೇರಿದಂತೆ ಹಲವಾರು ಪ್ರಶಸ್ತಿ, ಗೌರವಗಳಿಗೆ ಭಾಜನರಾಗಿದ್ದಾರೆ.




ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರಿಂದ ಡಾ. ದೇ. ಜವರೇಗೌಡ ಅವರಿಗೆ 'ಕರ್ನಾಟಕ ರತ್ನ' ಪ್ರಶಸ್ತಿ ಪ್ರದಾನ. ವೇದಿಕೆಯಲ್ಲಿ ಪೂಜ್ಯ ಡಾ. ಶ್ರೀ ವೀರೇಂದ್ರ ಹೆಗಡೆಯವರು

**ಸಂಘ ಸಂಸ್ಥೆಗಳು :** ದೇಜಗೌ ಅವರು ಹಲವಾರು ಸಂಘ ಸಂಸ್ಥೆಗಳಲ್ಲಿ ತೊಡಗಿಸಿಕೊಂಡು ಆಯಾ ಹುದ್ದೆಗಳಿಗೆ ಘನತೆ ಗೌರವವನ್ನು ತಂದು ಕೊಟ್ಟಿದ್ದಾರೆ. ಕುವೆಂಪು ವಿದ್ಯಾವರ್ಧಕ ಟ್ರಸ್ಟ್‌ನ ಗೌರವ ನಿರ್ದೇಶಕರಾಗಿ, ಕೆ.ವಿ. ಶಂಕರೇಗೌಡ ಸಾಂಸ್ಕೃತಿಕ ಪ್ರತಿಷ್ಠಾನದ ಸದಸ್ಯರಾಗಿ, ಅಂಬೇಡ್ಕರ್ ಸಾಹಿತ್ಯ ಭಾಷಾಂತರ ಸಮಿತಿಯ ಸದಸ್ಯರಾಗಿ, ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನದ ಸಂಸ್ಥಾಪಕ ಅಧ್ಯಕ್ಷರಾಗಿ, ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ವಿಶ್ವ ಬಸವ ಮಹಾಸಭೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ವಿನಮ್ರತೆ ಡಾ. ದೇಜಗೌ ಅವರದಾಗಿದೆ.

**ಶ್ರೀಮಠದೊಂದಿಗೆ ಅವಿನಾಭಾವ ಸಂಬಂಧ :** ಡಾ. ದೇಜಗೌ ಅವರಿಗೆ ಶ್ರೀ ಸಿದ್ಧಗಂಗಾ ಮಠದ ಬಗ್ಗೆ, ಕರ್ನಾಟಕ ರತ್ನ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅನನ್ಯ ಭಕ್ತಿ ಗೌರವವನ್ನಿಟ್ಟುಕೊಂಡಿದ್ದರು. ಅನೇಕ ಸಲ ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯರ ದರ್ಶನಾಶೀರ್ವಾದ ಪಡೆದು ಕೃಪಾದೃಷ್ಟಿಗೆ ಪಾತ್ರರಾದ ಪುಣ್ಯಜೀವಿ. ಪರಮಪೂಜ್ಯರನ್ನು ಕುರಿತು ಅವರು ಬರೆದಿರುವ ಹತ್ತು ಅಧ್ಯಾಯಗಳನ್ನೊಂಡ **'ಸಿದ್ಧಗಂಗೆಯ ಶಿವನಿಧಿ'** ಪರಮಪೂಜ್ಯರ ಮೇರು ಸದೃಶ, ಘನವ್ಯಕ್ತಿತ್ವವನ್ನು ಅನಾವರಣಗೊಳಿಸುವ ಮೌಲಿಕ ಗ್ರಂಥ. ಅವರು ಲೇಖಕರ ನುಡಿಯಲ್ಲಿ ಹೇಳಿಕೊಂಡಂತೆ "ನಾನು ಕೇಳಿದ ಮಾಹಿತಿಯನ್ನು ಶ್ರೀಮಠದ ವತಿಯಿಂದ ಒದಗಿಸಿದ್ದರೆ ಇನ್ನೂ ಚೆನ್ನಾಗಿ ಬರೆಯಬಹುದಾಗಿತ್ತು" ಎಂಬ ಕಳಕಳಿಯನ್ನು ಆಡಳಿತ ಕಛೇರಿಯಲ್ಲಿರುವವರು ಅರ್ಥಮಾಡಿಕೊಳ್ಳಬೇಕು.

ಗ್ರಂಥಕ್ಕೆ ಮುನ್ನುಡಿಯನ್ನು ಬರೆದಿರುವ ಅಂಕಣಕಾರರು, ಆರ್ಥಿಕ ತಜ್ಞರೂ, ವಿಮರ್ಶಕರೂ ಆದ ಪ್ರೊ. ಎಚ್ಚೆಸ್ಕೆ ಅವರು "ಪ್ರೊ. ದೇಜಗೌ ಅವರ 'ಸಿದ್ಧಗಂಗೆಯ ಶಿವನಿಧಿ' ಕೃತಿಯನ್ನು ಓದಿದಾಗ ನನ್ನ ಮನಸ್ಸಿನಲ್ಲಿ ಈ ಭಾವನೆಗಳು ಮಿಂಚಿದವು. ಡಾ. ಶ್ರೀ ಶಿವಕುಮಾರ ಸ್ವಾಮಿಗಳನ್ನು ಕುರಿತು ಇಲ್ಲಿ ನೀಡಿರುವ ವಿವರಗಳು ಕೇವಲ ಘಟನೆಗಳ ಸರಪಳಿಲ್ಲ. ನಮ್ಮ ಕಣ್ಣು ಮುಂದೆ ಮಹಾಜೀವವೊಂದು ವಿಕಾಸಗೊಂಡ ಬಗೆಯನ್ನು ನಾವು ಇಲ್ಲಿ ಕಾಣಬಹುದಾಗಿದೆ. ಸಾಹಿತ್ಯ ಕೃಷಿಯೆಂಬುದು ಒಂದು ಸಾವಯವ ಸೃಷ್ಟಿ. ಸಾಹಿತ್ಯಕ್ಕೆ ವಸ್ತುವಾಗುವ ವ್ಯಕ್ತಿಗಳೂ ಸಾವಯವ ಸೃಷ್ಟಿಗಳಿಗೆ ಬದುಕೇ ಒಂದು ಕಾಯಕ. ಮಹಾವ್ಯಕ್ತಿಗಳ ಬದುಕು ಮಹಾಕಾಯಕ. ಅದೊಂದು ಚಲನಶೀಲ ತೇಜೋರಾಶಿ. ಮುಟ್ಟಿದ್ದಕ್ಕೆಲ್ಲ ತೇಜಸ್ಸನ್ನು ಅಂಟಿಸುವ ಜ್ಯೋತಿಶಿಖೆ. ಅದು ಮಾನವ ಸೃಷ್ಟಿಯಲ್ಲ, ದೈವ ಸೃಷ್ಟಿ. ದೈವವೇ ಆ ರೂಪದಲ್ಲಿ ಅವಿರ್ಭವಿಸಿದಂತೆನಿಸುವ ದಿವ್ಯಜೀವಗಳ ಬದುಕಿನ ಒಕ್ಕಣೆ ಬರಡಾಗುವುದು ಹೇಗೆ ಸಾಧ್ಯ ? ಅದನ್ನು ಕಾಣುವ ಕಣ್ಣು, ಒಕ್ಕಣಿಸುವ ಲೇಖನಿಯೂ ಸತ್ತ್ವಪೂರಿತವಾಗಿದ್ದಾಗ ಆ ದಿವ್ಯಚೇತನಮೂರ್ತಿ ನಮ್ಮ ಕಣ್ಣು ಮುಂದೆ ಕಾಣಿಸಿಕೊಳ್ಳುತ್ತದೆ. ನಮಗೂ ಆ ದಿವ್ಯ ದರ್ಶನ ದೊರಕುವಂತಾಗುತ್ತದೆ. ಪ್ರೊ. ದೇಜಗೌ ಅವರು ಜೀವನಚರಿತ್ರೆಗಳ ರಚನೆಯಲ್ಲಿ ಅಪೂರ್ವ ಸಿದ್ಧಿಗೊಳಿಸಿರುವ ಲೇಖಕರು. ಅವರು ಈವರೆಗೆ ಕಡೆದು ನಿಲ್ಲಿಸಿರುವ ಮೂರ್ತಿಗಳ ಸಾಲಿಗೆ ಈಗ ಈ ಹೊಸ ಹಾಗೂ ಅಮೋಘ ಸೇರ್ಪಡೆ' ಎಂದು ಬಣ್ಣಿಸಿದ್ದಾರೆ. ಅವರ ಒಂದೊಂದು ನುಡಿಗಳೂ, ದೇಜಗೌ ಅವರ ವಿದ್ವತ್ತಿಗೆ ಭಾಷ್ಯ ಬರೆದಂತಿದೆ.

## ಓದುಗರ ಅಭಿಪ್ರಾಯ

ಮಾನ್ಯರೇ,

ಸಿದ್ಧಗಂಗಾ ಬಸವ ಜಯಂತಿಯ ವಿಶೇಷ ಸಂಚಿಕೆ ನೋಡಲಾಯಿತು. ಸಂತೋಷ. ಒಳಪುಟಗಳನ್ನು ತೆರೆದು ನೋಡಿದಾಗ ಸವೆಯದ ಬಸವಣ್ಣನವರ ಸಾಹಿತ್ಯವನ್ನು ಒದಗಿಸಿದ್ದೀರಿ. ನುರಿತ ಲೇಖಕ ಅನುಭಾವಿಗಳ ಲೇಖನಗಳು ಒಳ್ಳೆ ಮಾರ್ಮಿಕವಾಗಿ ಜೀವನ ಸಿದ್ಧಾಂತಗಳ ಪರಿಚಯವನ್ನು ಸಾಹಿತ್ಯದ ಚೌಕಟ್ಟಿನಲ್ಲಿ ಕೂಡಿಸಿ ವಾಚಕರ ಬೌದ್ಧಿಕ ಕಸರತ್ತಿಗೆ ಬುತ್ತಿ ಕಟ್ಟಿಕೊಟ್ಟಿದ್ದೀರಿ. ನಿಮ್ಮ ಮತ್ತೊಂದು ತಿಂಗಳ ಪತ್ರಿಕೆ ಬರುವವರೆಗೆ ಓದುತ್ತಾ ಓದುತ್ತಾ ಚಿಂತನಾಶೀಲರಾಗಲು ಪ್ರೇರೇಪಿಸಿದ್ದೀರಿ.

'ರಾಷ್ಟ್ರೀಯ ಬಸವ ಪ್ರಶಸ್ತಿ' ಪುರಸ್ಕೃತ ಡಾ. ಗೊ.ರು. ಚನ್ನಬಸಪ್ಪನವರ ಬಗ್ಗೆ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಬರೆದ ಲೇಖನ ಸಮಯೋಚಿತವೂ ಆಗಿದೆ. ಅವರ ಶರಣ ಸಾಹಿತ್ಯ ಅದ್ಭುತವಾಗಿದೆ. ಅವರಿಗೂ, ನಿಮಗೂ ಧನ್ಯವಾದಗಳು.

– ನಾ.ಮ. ಬಸವರಾಜಯ್ಯ, ನಾಗರಹಾಳ

**ಓದುಗರ ಅಭಿಪ್ರಾಯಗಳನ್ನು ಸಿದ್ಧಗಂಗಾ ಪತ್ರಿಕೆ ಸ್ವಾಗತಿಸುತ್ತದೆ.**

– ಸಂಪಾದಕರು

## ಶ್ರದ್ಧಾಂಜಲಿ



**ಡಾ॥ ದೇ. ಜವರೇಗೌಡರು**

ಕನ್ನಡ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಮುಖ್ಯಸ್ಥರಾಗಿ, ಕುಲಪತಿಗಳಾಗಿ ಸೇವೆ ಸಲ್ಲಿಸಿದ್ದ ಡಾ. ದೇ. ಜವರೇಗೌಡರು ನಾಡು, ನುಡಿ, ಕಲೆ, ಸಂಸ್ಕೃತಿ ಬಗ್ಗೆ ಅಪಾರ ಕಳಕಳಿ, ಗೌರವವನ್ನು ಇಟ್ಟುಕೊಂಡಿದ್ದರು. ಶ್ರೀಯುತರು ಮೇ ೩೦ ರಂದು ವಿಧಿವಶರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಕನ್ನಡ ಸಾರಸ್ವತ ಲೋಕಕ್ಕೆ ತುಂಬಲಾರದ ನಷ್ಟವಾಗಿದೆ.

ನಾಡು, ನುಡಿ, ಜಲ ಸಮಸ್ಯೆಯುಂಟಾದಾಗ ಚಳವಳಿಯ ಮುಂಚೂಣಿಯಲ್ಲಿದ್ದು ಪ್ರೋತ್ಸಾಹ ಹಾಗೂ ಮಾರ್ಗದರ್ಶನ ನೀಡುತ್ತಿದ್ದರು. ಕನ್ನಡ ಶಾಸ್ತ್ರೀಯ ಭಾಷೆಯಾಗಲು ಅವರು ನೀಡಿದ ಕೊಡುಗೆ ಅಪಾರ. ೨೫೦ ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ನೀಡಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಡಾ. ದೇಜಗೌ ಅವರು ಪದ್ಮಶ್ರೀ, ಬಸವ ಪುರಸ್ಕಾರ, ಕರ್ನಾಟಕ ರತ್ನ, ಸಿದ್ಧಗಂಗಾ ಶ್ರೀ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರತಿಷ್ಠಿತ ಪ್ರಶಸ್ತಿಗಳನ್ನು ಪಡೆದ ಗೌರವಕ್ಕೆ ಭಾಜನರಾಗಿದ್ದರು. ಶ್ರೀ ಸಿದ್ಧಗಂಗಾ ಮಠದ ಬಗ್ಗೆ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರ ಭಕ್ತಿ-ಗೌರವವನ್ನಿಟ್ಟುಕೊಂಡಿದ್ದರು. ೯೮ ವರ್ಷಗಳ ಸಾರ್ಥಕ ಜೀವನವನ್ನು ನಡೆಸಿದ ಡಾ. ದೇಜಗೌ ಅವರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಅಗಲಿಕೆಯ ನೋವನ್ನು ಸಹಿಸುವಂತೆ ಅವರ ಕುಟುಂಬ ವರ್ಗದವರಿಗೆ ದಯಾಮಯಾನಾದ ಪರಶಿವನು ನೀಡಲಿ ಎಂದು **'ಸಿದ್ಧಗಂಗಾ'** ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.



# ಶರಣ ಸಾಹಿತ್ಯ ಮತ್ತು ಜಾನಪದ

– ಪ್ರೊ. ಹೆಚ್.ವಿ. ವೀರಭದ್ರಯ್ಯ *

"ಶರಣಸಾಹಿತ್ಯ ಕಾಲದ ದೃಷ್ಟಿಯಿಂದ ಪ್ರಾಚೀನವಾಗಿರುವಾಗಿರುವಂತೆ ಪ್ರಭಾವದ ದೃಷ್ಟಿಯಿಂದ ವ್ಯಾಪಕವಾಗಿದೆ. ಸಾಹಿತ್ಯದ ದೃಷ್ಟಿಯಿಂದ ಕ್ರಾಂತಿಕಾರಕವಾಗಿರುವಂತೆ, ಸಮಾಜದ ಉದಾರದ ದೃಷ್ಟಿಯಿಂದ ಉದಾತ್ತವಾಗಿದೆ; ೧೨ನೇ ಶತಮಾನದಲ್ಲಿ ಕರ್ನಾಟಕ ಕಂಡ ಈ ಯುಗ ಅದ್ವಿತೀಯವಾದುದು. ಇಡೀ ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿಯೇ ಅಪೂರ್ವವಾದುದು. ಧರ್ಮ ತನ್ನ ಸಂಪ್ರದಾಯದ ಕಟ್ಟುಗಳನ್ನು ಕಿತ್ತೊಗೆದು ಸಾಮಾನ್ಯ ಜನತೆಯನ್ನು ಉದರಿಸುವ ಪವಿತ್ರ ಶಕ್ತಿಯಾಯಿತು ಈ ಯುಗದಲ್ಲಿ."[೧]

ಶರಣ ಸಾಹಿತ್ಯ ಉದಯವಾದದ್ದೇ ಸಮಷ್ಟಿಕಲ್ಯಾಣದ ದೃಷ್ಟಿಯಿಂದ. ಶರಣರು ಮೂಲತಃ ಸಾಧಕರು. ಸಾಹಿತಿಗಳಾಗ ಬೇಕೆಂದು ಅಪೇಕ್ಷೆಪಟ್ಟವರಲ್ಲ, ಅವರು ಅನುಭಾವಿಗಳು. ಅವರು ರಚಿಸಿದ ಸಾಹಿತ್ಯ ಅನಾಯಾಸವಾಗಿ ಮೂಡಿಬಂದ ಪ್ರಾಸಾದಿಕ ವಾಣಿ. ಆತ್ಮಾನುಸಂಧಾನವೇ ಅವರ ಗುರಿಯಾಗಿತ್ತು. ಆ ಅನು ಸಂಧಾನದ ಅಂಗವಾಗಿ ಅನಿವಾರ್ಯವೆಂಬಂತೆ ಸಾಹಿತ್ಯ ಸೃಷ್ಟಿಯಾದದ್ದು ಒಂದು ವಿಸ್ಮಯ. ಆ ಸಾಹಿತ್ಯದ ಸೃಷ್ಟಿಯಾದರೋ "ದಂದಣ ದತ್ತಣ"ವೆಂಬಂತಹುದಾಗಿ ಮಾತಿಲ್ಲದವರಿಗೆ ಮಾತುಕೊಟ್ಟದ್ದು. ಶರಣ ಸಾಹಿತ್ಯದ ಲೋಕ ಆಧ್ಯಾತ್ಮಿಕವಾದರೂ "**ಕರ್ತಾರನ ಕಮ್ಮಟ**"ವನ್ನು ಮರೆತದ್ದಲ್ಲ. ನಾವು ಅಲ್ಲಿ ಕಾಣುವುದು ಅಪಾರವಾದ ಅನುಕಂಪೆ, ಜಗತ್ತನ್ನೆಲ್ಲಾ ದುಃಖದಿಂದ ಮುಕ್ತಗೊಳಿಸಬೇಕೆಂಬ ಬಯಕೆ. ಹೀನರನ್ನೂ ದೀನರನ್ನೂ, ದಲಿತರನ್ನೂ ದುಃಖಿಗಳನ್ನೂ ತನ್ನವರೆಂದು ಅಪ್ಪಿಕೊಳ್ಳುವ ಆತ್ಮೀಯತೆ. ಸ್ವತಂತ್ರ ವಿಚಾರ ವಿಮರ್ಶೆಯೊಡನೆ ವಿಶ್ವವ್ಯಾಪಕವಾದ ಲೋಕಕಾರುಣ್ಯ, ಸಮಾಜದ ಹುಳುಕನ್ನು ತಿದ್ದುವ ದಿಟ್ಟತನದೊಡನೆ, ಸತ್ಯ ಸ್ವರೂಪದ ಸಾಕ್ಷಾತ್ಕಾರವನ್ನು ಪಡೆಯುವ ಅಂತರ್‌ದೃಷ್ಟಿ, ಕವಿ ಹೃದಯದ ಭಾವನೆಯ ಆವೇಗ, ಅದನ್ನು ಅಭಿವ್ಯಕ್ತಗೊಳಿಸುವ ಕಾವ್ಯಶಕ್ತಿ – ಈ ಬಹುಮುಖವಾದ ಪ್ರತಿಭೆಯಿಂದ ಸಮನ್ವಿತವಾದುದು ಅವರ ವ್ಯಕ್ತಿತ್ವ. ಆದುದರಿಂದಲೇ ಅದು ಇಡೀ ಭಾರತದ ವಿವಿಧ ಭಾಗಗಳಿಂದ ಸಾಧಕರನ್ನು ಆಕರ್ಷಿಸಲು ಸಮರ್ಥವಾಯಿತು. ಅವರ ನೇತೃತ್ವದಲ್ಲಿ ಕರ್ನಾಟಕ, ಉದಾತ್ತ ಸಂಸ್ಕೃತಿಯ ಚಿತ್ರಗಳನ್ನು ಬಿತ್ತರಿಸಿ ತೋರುವ ರಂಗಸ್ಥಲವಾಗಿ ಪರಿಣಮಿಸಿತು."[೨]

ಧರ್ಮತತ್ವಗಳನ್ನು ಶರಣಸಾಹಿತ್ಯ ಪರಿಣಾಮಕಾರಿಯಾಗಿ ಜನಮನಕ್ಕೆ ಮುಟ್ಟಿಸಿದ ಶಕ್ತಿಯುತವಾದ ಮಾಧ್ಯಮ. ನಮ್ಮ ಸಂಸ್ಕೃತಿಯ ಬೆನ್ನೆಲುಬೇ ಧರ್ಮ. ಶರಣರಿಗಿಂತಲೂ ಧರ್ಮವೆಂಬುದು ಕೇವಲ ಗುರು-ಲಿಂಗ-ಜಂಗಮಕ್ಕಷ್ಟೇ ಸೀಮಿತವಾಗಿರಲಿಲ್ಲ. ಉಡುವ, ಉಣ್ಣುವ, ನುಡಿವ, ನಡೆವ, ನೋಡುವ ಕೇಳುವದಷ್ಟೇ ಆಗಿರದೆ ಆಚರಣೆಗೆ ಅಳವಡುವುದಾಗಿತ್ತು. ಜೀವನದ ಎಲ್ಲ ಆಚಾರ ವ್ಯವಹಾರಗಳಿಗೆ ವ್ಯಾಪಿಸಿತ್ತು. ಇಹಪರಗಳೆಂದರೆ ಸಮನ್ವಯ ಸಿದಾಂತ ಅದು. ಜೀವನದಲ್ಲಿ ಹಾಸು ಹೊಕ್ಕಾಗಿತ್ತು. "ಜನಪದ ಸಾಹಿತ್ಯಕ್ಕೆ ಕಾರಣ ಕರ್ತರಾದ ಹಳ್ಳಿಯ ಜನತೆಯ ವಿಷಯಕ್ಕಂತೂ ಈ ಮಾತು ಇನ್ನೂ ಹೆಚ್ಚಾಗಿ ಅನ್ವಯಿಸುತ್ತದೆ"[೩]. ಧರ್ಮ ಮತ್ತು ಜೀವನ ಶರಣರಿಗಾಗಲೀ, ಜನಪದರಿಗಾಗಲೀ ಬೇರೆ ಬೇರೆಯಲ್ಲ. ಒಂದನ್ನು ಬಿಟ್ಟು ಮತ್ತೊಂದಿಲ್ಲ. ಅದು ಅವರ ಜೀವನ ಧ್ಯೇಯ. "**ಲಿಂಗ ಮೆಚ್ಚಿ ಅಹುದಹುದೆನ್ನು**"ವಂತೆ ಬಾಳುವ ದೃಷ್ಟಿ ಅವರದು. ಆದುದರಿಂದಲೇ "**ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು**" ಎನ್ನುವಂತಾದುದು ಶರಣಸಾಹಿತ್ಯದಲ್ಲಿ ಜಾನಪದ.

ಏಕೆಂದರೆ "ಶಿವಶರಣ ಸಾಧು-ಸತ್ಪುರುಷರ ಪಾದಧೂಳಿಯಿಂದ ಕನ್ನಡ ನಾಡು ಪಾವನವಾಗಿದೆ. ಇವರ ಪವಾಡಗಳನ್ನೂ, ಲೀಲೆಗಳನ್ನೂ ಕಂಡು ಕೇಳಿದ ಜನಪದವು ಇವರನ್ನು ಹಾಡಿ ಕೊಂಡಾಡುತ್ತ ಬಂದಿದೆ. ಸದಾಚಾರ ಸಂಪನ್ನರಾದ ಶಿವಶರಣರ ಪ್ರಭಾವವು ಜನತೆಯ ಮೇಲೆ ಬಹಳವಾಗಿದೆ. ಶಿವಶರಣರ ವಿಷಯ ವನ್ನು ಕುರಿತಂತೆ ಜಾನಪದ ಸಾಹಿತ್ಯವು ಅಪಾರವಾಗಿದೆ".[೪]

ಶರಣಸಾಹಿತ್ಯದಲ್ಲಿ ಜಾನಪದ ಅರಳಿದ್ದು ಹತ್ತುಹನ್ನೊಂದು ಬಗೆಯಲ್ಲಿ. ಕೋಲಾಟ, ಲಾವಣಿ, ಗೀಗೀ ಪದ, ಬಂಡಿಯ ಪದ, ಬೀಸುವ, ಕುಟ್ಟುವ ಹಾಡುಗಳು, ಗಾದೆ, ಒಗಟು, ಹಂತಿಪದಗಳು ಇತ್ಯಾದಿಯಾಗಿ. ಅವುಗಳಲ್ಲಿ ತ್ರಿಪದಿಗಳದೇ ಸಿಂಹಪಾಲು. ಇಲ್ಲಿ ಒಂದು ಮಾತನ್ನು ಗಮನಿಸಬಹುದೆಂದು ಕಾಣುತ್ತದೆ. ಶರಣರು ರಚಿಸಿದ ಸ್ವರವಚನಗಳಾಗಲೀ, ತ್ರಿವಿಧಿಗಳಾಗಲೀ ಜನಪದರಿಗೆಂದೇ ಸೃಜನಗೊಂಡವಿರ ಬೇಕೆಂದು ಭಾವಿಸುವುದು ತಪ್ಪಾಗಲಾರದೇನೋ!

* ಸಂಪಾದಕರು, ಸಿದ್ಧಗಂಗಾ ಮಾಸಪತ್ರಿಕೆ, ಸಿದ್ಧಗಂಗಾ ಮಠ, ತುಮಕೂರು





*ಶರಣರ ನೆನೆದಾರೆ ಸರಗೀಯ ಇಟ್ಟಾಂಗ*
*ಅರಳಮಲ್ಲೀಗೆ ಮುಡಿದಾಂಗ । ಕಲ್ಯಾಣ*
*ಶರಣರ ನೆನೆಯೊ ನನ ಮನವೆ ॥*

ಎಂದು ಜನಪದ ಕವಿ ಕಲ್ಯಾಣದ ಶರಣರನ್ನು ನೆನೆದಿದ್ದಾನೆ. ಕಲ್ಯಾಣದ ಶರಣರನ್ನು ನೆನೆಯುವುದೆಂದರೆ ಅವನಿಗೆ ಎಲ್ಲಿಲ್ಲದ ಹಿಗ್ಗು. ತನ್ನ ಮನಸ್ಸು "ಅನ್ಯ ವಿಷಯಕ್ಕೆಳಸದಂತೆ",

*ಲಿಂಗವ ನೆನೆ ಮನವೆ ಜಂಗಮವ ನೆನೆ ಮನವೆ*
*ಲಿಂಗ ಜಂಗಮವ ನೆನೆ ಮನವೆ ॥ ಕಲ್ಯಾಣದ*
*ಕಲ್ಯಾಣದ ಲಿಂಗ ಜಂಗಮವ ನೆನೆ ಮನವೆ ॥*

ಎನ್ನುತ್ತ ಮನವನ್ನು – ಮರ್ಕಟ ಮನಸ್ಸನ್ನು – ಶಿಕ್ಷಣಕ್ಕೊಳಪಡಿಸುತ್ತಾನೆ; ಸಾಂಸ್ಕೃತಿಕಯುತವನ್ನಾಗಿಸುವ ಪ್ರಯತ್ನ ಮಾಡುತ್ತಾನೆ. "ಮುಂದು ಜಾವದೊಳೆದ್ದು ಲಿಂಗದಂಘ್ರಿಯ ನೆನೆವ" ಪ್ರಭು ವಾಣಿಯನ್ನು ಸ್ಮರಣೆಗೆ ತರುತ್ತಾನೆ. ಅಷ್ಟೇ ಅಲ್ಲ, ಗುರು ಹಿರಿಯರನ್ನೂ ಬೆಳಗಾಗಿ ಎದ್ದು ನೆನೆಯುವುದುಂಟು :

*ಅತ್ತೆ ಮಾವಗೆ ಶರಣು ಮತ್ತೆ ಗುರುವಿಗೆ ಶರಣು*
*ಮತ್ತೊಂದು ಶರಣು ಬಸವನಿಗೆ । ಎನ್ನುತ*
*ನಾ ಬಗ್ಗಿದೆ ಮನೆಯ ಕೆಲಸಕ್ಕೆ ॥*

ಸದಾಚಾರ, ಗುರುಹಿರಿಯಲ್ಲಿ ವಿಧೇಯತೆ, ಬಸವ ಸ್ಮರಣೆಯ ಮೂಲಕ ಕಾಯಕಕ್ಕೆ ತೊಡಗುವುದರಲ್ಲಿ ಜೀವನದ ಅರ್ಥವಂತಿಕೆಯನ್ನು ಕಾಣುವುದು ಜನಪದರ ಸಂಸಾರ ಸಂಹಿತೆಯೇ ಆಗಿದೆ. ಬಸವಣ್ಣನಂತೂ ಜನಪದರ ಅಭಿಮಾನದ ದೇವರು. ಅವನನ್ನು ಎಷ್ಟು ಹಾಡಿದರೂ, ಕೊಂಡಾಡಿದರೂ ಅವರಿಗಿಲ್ಲ ತೃಪ್ತಿ :

*ಕರುಣ ಬಂದರೆ ಕಾಯೋ ಮರಣ ಬಂದರೆ ಒಯ್ಯೋ*
*ಕರುಣಿ ಕಲ್ಯಾಣ ಬಸವಣ್ಣ । ಶಿವಲಿಂಗ*
*ಕಡೆತನಕ ಕಾಯೋ ಅಭಿಮಾನ ॥*

ಎಂದು ಬೇಡುತ್ತಾರೆ. ಬಸವಣ್ಣನಿಗಿಂತ ಕರುಣೆಯನ್ನು ಇನ್ನೆಲ್ಲಿ ಕಾಣುವುದು? "ಅಪ್ಪನು ಮಾದಾರ ಚೆನ್ನ ಬೊಪ್ಪನು ಡೋಹಾರಕಕ್ಕ' ನೆಂದ ಆ ಮಹಾಕಾರುಣ್ಯ ಶೀಲನನ್ನು "ಶಿವಲಿಂಗ"ವೆಂದೇ ಅಭಿನ್ನವಾಗಿ ಕಂಡ ಜನಪದರು ದಾರ್ಶನಿಕರೇ ಆಗಿದ್ದಾರೆ. ವಿನಯ, ಸ್ವಾಭಿಮಾನಿಗಳೇ ಬಸವಣ್ಣನವರಲ್ಲಿ ಎದ್ದು ಕಾಣುವ ಸದ್ಗುಣಗಳು. ಅಭಿಮಾನವನ್ನೇ ಬೇಡುವ ಜನಪದರ ಜೀವನ ಸೃಷ್ಟಿಯೂ ಅಷ್ಟೇ ಅಭಿಮಾನಾರ್ಹವಾಗಿದೆ. ಬಸವಣ್ಣನವರನ್ನು ಜನಪದ ಕವಿಗಳು ವರ್ಣಿಸುವಲ್ಲಿ ಅದೆಂಥ ಸೊಗಸಿದೆ ಕೇಳಿ :

*ಮಲ್ಲಿಗೆ ಇದ್ದಾಗ ಮುಳ್ಳ್ಯಾಕೆ ಮುಡಿಯುವೆ*
*ಕಲ್ಯಾಣದೊಳಗೆ ಬಸವಣ್ಣನಿರುವಾಗ । ಕಲ್ಲಿಗ್ಯಾಕೆ*
*ಕೈಯಿ ಮುಗಿಯುವೆ ॥*

ಎನ್ನುತ್ತದೆ. ಮಲ್ಲಿಗೆ ಹೂವಿಗೆ ಬಸವಣ್ಣನನ್ನು ಹೋಲಿಸಿರುವುದರಲ್ಲಿರುವ ಔಚಿತ್ಯ, ಕಲ್ಲಿಗ್ಯಾಕೆ ಕೈಯ ಮುಗಿಯುವೆ ಎಂಬಲ್ಲಿರುವ ವೈಚಾರಿಕತೆ ಗಮನಾರ್ಹವಲ್ಲವೆ? ಬಸವಣ್ಣ ಮಾಡಿದ್ದಾರೂ ಏನು? ಜನಪದಕ್ಕಾಗಿ,

*ಉತ್ತಿ ಬಿತ್ತುವ ಮಂತ್ರ ಬಿತ್ತಿ ಬೆಳೆಯುವ ಮಂತ್ರ*
*ಸತ್ಯ ಶಿವಮಂತ್ರ ನಿನ್ನೆಸರು । ಬಸವಯ್ಯ*
*ಮರ್ತ್ಯದೊಳು ಮಂತ್ರ ಜೀವನಕ್ಕೆ ॥*

ಎಂಬಂಥ ಆಚರಣೆಗೆ ಸಿಲುಕದಂಥ, ಅನುಷ್ಠಾನ ಯೋಗ್ಯವಾದ ಜನಪದರೆಲ್ಲ ಅನುಸರಿಸುವಂಥ ಜೀವನ ಮಾರ್ಗವನ್ನು, "ಮರ್ತ್ಯದೊಳು ಮಂತ್ರವನ್ನು". ಆ ಮಂತ್ರ ಕನ್ನಡದಲ್ಲಿ ರಚಿತವಾದದ್ದು. ಅದೂ ಉತ್ತುವಾಗ, ಬಿತ್ತುವಾಗ ಜಪಿಸುವಂಥ ಸತ್ಯ ಸರಳ ಮಂತ್ರ – ಅದೇ ದುಡಿಮೆ ಎಂಬ ಮಂತ್ರ; ಶ್ರಮಜೀವನದ ಮಂತ್ರ. ಇಂದಿಗೂ ಪ್ರಸ್ತುತವಾಗುವಂಥ ಮಂತ್ರ. ಅಷ್ಟೇ ಅಲ್ಲ, ಬಸವಣ್ಣ –

*ಕಾಯಕವ ಕಲಿಸುದಕ ನಾಯಕನು ಬಸವಯ್ಯ*
*ಜೀಯ ಹೊಸಮತಕೆ ಶಿವಭಕ್ತಿ ॥ ಸಾರುದಕೆ*
*ರಾಯ ಜೀವನದ ಹೊಸ ಗುಡಿಗೆ ॥*

"ನಾಯಕ"ನಾದ ಬಸವಣ್ಣ ಜನಪದರ ಕಣ್ಣಿನಲ್ಲಿ "ಕಾಯ ಜೀವನ"ವನ್ನೂ "ಭಕ್ತಿಪಕ್ಷ"ವನ್ನು ಕಂಡರಿದವನು. ಕಾಯಕ ಕೇವಲ ಸ್ವಾರ್ಥಕ್ಕೆ ಮಾಡುವ ಕೆಲಸವಲ್ಲ, ವ್ಯಕ್ತಿಯಲ್ಲ. ಸಮಷ್ಟಿಗಾಗಿ ಅರ್ಪಿಸಿಕೊಳ್ಳುವ ತ್ಯಾಗವೆಂಬುದನ್ನು ಕಲಿಸಿಕೊಟ್ಟವನು ಬಸವಣ್ಣ. ಪರಹಿತ ದೃಷ್ಟಿಯುಳ್ಳಾತನೇ ನಾಯಕ ತಾನೆ?

*ದಾಸೋಹಿ ಬಸವಣ್ಣ ದಾಸೋಹ ಕಲಿಸಿದನು*
*ದೇಶ ದೇಶೆಲ್ಲ ಕೇಳುತಲಿ । ಹೊಸಮಾತ*
*ಕೂಗಿದವು ವೇದ ಹುಸಿಯೆಂದು ॥*

ದಾಸೋಹ ಅರ್ಪಣಾಮಾರ್ಗ, ದಾನದಂಥಲ್ಲ, ದಾನದಲ್ಲಿ 'ಕರ್ತೃ'ಭಾವವಿರುತ್ತದೆ. ದಾಸೋಹದಲ್ಲಿ 'ಅನುಭಾವ'ವಿರುತ್ತದೆ. ಜನಪದರಿಗೆ 'ದಾಸೋಹ', ಹೊಸ ಮಾತಾಯಿತು.

*ಇಳೆ ನಿಮ್ಮ ದಾನ ಬೆಳೆ ನಿಮ್ಮ ದಾನ*
*ಸುಳಿದು ಸೂಸುವ ವಾಯು ನಿಮ್ಮ ದಾನ.*
*ನಿಮ್ಮ ದಾನವನುಂಡು ಅನ್ಯರ ಹೊಗಳುವ*
*ಕುನ್ನಿಗಳನೇನೆಂಬೆ ರಾಮನಾಥ.*

ಸಮಾಜ ಸುಧಾರಣೆಯಲ್ಲಿ ಬಸವಣ್ಣನ ಮಾತು,

*ಹೊಲೆಯ ಮಾದಿಗರೆಂಬ ಬಲೆಯಾತ ಕಿತ್ತೊಗೆದ*
*ಭಲರೆ ಬಸವಯ್ಯ ಬಸವರಸ ನಿನ್ನುಸುರು*
*ನೆಲೆಯಾತು ನಿತ್ಯ ಜನಪದಕೆ ॥*

ಎಂಬುದು ಜನಪದರ ದೃಢನಿರ್ಧಾರ. ಅಲ್ಲದೆ,

*ಬಸವ ಭಕ್ತಿಯ ಬೀಜ ಮುಕ್ತಿಯ ತೇಜ*
*ಬಸವ ಕಾಯಕದ ಗುರುಬೀಜ । ಶಿವಮತಕೆ*
*ಬಸವ ಓಂಕಾರ ಶಿವನಾಮ ॥*

ಎಂದಾದ **'ಭಕ್ತಿ ಭಂಡಾರಿ'**, 'ಸಮಗ್ರಕ್ರಾಂತಿಯ ಮೂಲಪುರುಷ' ಮಾಡಿದ ಕ್ರಾಂತಿಯೆಂಥಹುದು?

*ಎಲ್ಲ ಬಲ್ಲಿದನಯ್ಯ ಕಲ್ಯಾಣ ಬಸವಯ್ಯ*
*ಚೆಲ್ಲಿದನು ತಂದು ಶಿವಬೆಳಕ । ನಾಡೊಳಗೆ*
*ಸೊಲ್ಲೆತ್ತಿ ಜನವು ಹಾಡುವುದು ॥*

ಎಲ್ಲೆಲ್ಲು **''ಶಿವಬೆಳಕ''** ಚೆಲ್ಲಿದ ಕ್ರಾಂತಿ ಬಸವಣ್ಣ ಮಾಡಿದ್ದು. ಶಿವನ ಬಳಿಗೆ ಜನತೆಯನ್ನೊಯ್ಯಲಿಲ್ಲ. ಜನತೆಯ ಬಳಿಗೇ ಶಿವನನ್ನು ಕರೆತಂದು ಶಿವಬೆಳಕು ಚೆಲ್ಲಿದ. ಅದಕ್ಕೆಂದೇ **''ಸೊಲ್ಲೆತ್ತಿ''** ಜನ ಹಾಡಿತು. ಅಂದೂ ಹಾಡಿತು, ಇಂದೂ ಹಾಡ ಬೇಕಾಗಿದೆ. ಇತ್ತೀಚೆಗೆ ಜನಪದ ಕಂಡಿರುವ ಎಲ್ಲ ಕ್ರಾಂತಿಗಳ ಫಲವನ್ನನುಭವಿಸಿಯೂ 'ಶರಣರು ಮಾಡಿದ ಕ್ರಾಂತಿ'ಯನ್ನು ಮತ್ತೊಮ್ಮೆ ಕಾಣಬೇಕಾಗಿದೆ. ಹೃದಯ ವಂತಿಕೆಯ ಆ ಕ್ರಾಂತಿಯೆಲ್ಲಿ? ಕೇವಲ ಪಂಚತಾರಾ ಹೋಟೆಲು ಗಳಿಂದ ಮೂಡಿಬರುವ ಇಂದಿನ ಕ್ರಾಂತಿಗಳೆಲ್ಲಿ? ''ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯ''ವಾಗಬೇಕಲ್ಲವೆ?

ಕಾಯಕ, ದಾಸೋಹಗಳು ಶರಣ ಸಂಸ್ಕೃತಿಯ ಎರಡು ಮುಖ್ಯ ಮೌಲ್ಯಗಳು. ಶರಣ ಸಾಹಿತ್ಯದಲ್ಲಿ ಇವು ಪ್ರತಿಪಾದಿತವಾಗಿರುವುದು ಸರ್ವವೇದ್ಯ. ಜನಪದವೂ ಸಹ ಇವುಗಳನ್ನು ಉಚ್ಚಮಟ್ಟದಲ್ಲಿ ಗೌರವಿಸಿದೆ. ಗುರು-ಲಿಂಗ-ಜಂಗಮದಷ್ಟೇ ಗೌರವಾನ್ವಿತವಾದುದು ಕಾಯಕವೆಂಬುದನ್ನು ಜನಪದ ಎತ್ತಿ ಹಿಡಿದಿದೆ.

ಮೇದರ ಕೇತಯ್ಯ ಬುಟ್ಟಿ ಮಾಡಿ ಜೀವಿಸುತ್ತಿದ್ದ ಸರಳ, ಸಾಮಾನ್ಯ ಒಬ್ಬ ಶರಣ. ಒಮ್ಮೆ ಬುಟ್ಟಿ ಮಾಡಲು ಬಿದಿರು ತರುವುದಕ್ಕಾಗಿ ಕಾಡಿಗೆ ನಡೆದ. ಒಂದು ಕಡೆ ಬಿದಿರು ಕಡಿದಾಗ ಬಂಗಾರ ಬಂತು.

*ಬಂಗಾರ ಹುಳ ಹತ್ತಿ ಭಂಗವಾಗಿದೆ ಬಿದಿರು*
*ಕಂಗಳಿಗೆ ಬೇಡ ಹೊಲೆಯೆಂದ । ದಾಸೋಹ*
*ಸಂಗ ಜೋಡಣೆಗೆ ಕುಂದೆಂದ ॥*

'ಅಪರಿಗ್ರಹ' ಕಾಯಕದ ಲಕ್ಷಣ. ಅನ್ಯರಿಂದ ಬಂದುದನ್ನು ಕಾಯಕ ಒಪ್ಪದು. ''ಕಾರೆಯ ಸೊಪ್ಪಾದಡೂ ಕಾಯಕದಿಂದಲೇ ಬರಬೇಕು; ಸತ್ಯಶುದ್ಧವೆನಿಸಬೇಕು !'' ಕೇತಯ್ಯನಿಗೆ ಬಂಗಾರ ಹುಳವಾಗಿ ಕಂಡಿತು. ಕಾಯಕಕ್ಕೆ ಅಶುದ್ಧವಾಯಿತು. ಮುಂದೆ ''ಮಳುಮಳಿಸಿ ತಿಳಿದ ಹೊಲೆಯೆಂದು''. ಕೊನೆಗೊಮ್ಮೆ ಒಂದು ಕಡೆ ಬಿದಿರು ಕಡಿದಾಗ ಕಾಲು ಜಾರಿ ಕೆಳಗೆ ಬಿದ್ದ. ದಸಿಯೊಂದು ಎದೆಗೆ ನಾಟಿ ರಕ್ತ ಚಿಮ್ಮಿತು. ನೋವಿನಲ್ಲೇ ಮನೆಗೆ ಬಂದ. ಸತಿ ಸಾತವ್ವ ದುಃಖಿತಳಾದಳು. ಆದರೆ ಕೇತಯ್ಯ ಪತ್ನಿಗೆ ಹೇಳಿದ : ಬೇಗ ದಾಸೋಹ ಮುಗಿಸೋಣ ಎಂದು. ಕಾಯಕದ ಮೇಲೆ ಆಣೆಯಿಟ್ಟು ''ಹಾರದಿರು ಪಡುಗಡಲ ಏರಿ ಇಳಿಯುವ ರವಿಯೆ'' ಎನ್ನುತ್ತ ಜಂಗಮ ದಾಸೋಹ ಮುಗಿಸಿದ ಅನಂತರ ಸಾತವ್ವನನ್ನು ಕರೆದು 'ಎದೆಗೆ ನಾಟಿದ ದಸಿ ಕೀಳು, ಕಿತ್ತಾಗ ಪ್ರಾಣ ಹೋಗಬಹುದು, ಅದಕ್ಕಾಗಿ ದುಃಖಬೇಡ, ಕಾಯಕ ಸಂದಿದೆ' ಎಂದ. ಸಾತವ್ವ ದಸಿ ಕಿತ್ತಳು. ಕಾಯಕವೆ ಶಿವಯೋಗವೆಂದು ನಂಬಿದ್ದ ''ಶಿವಯೋಗ ರವಿಯು ಮುಣುಗಿದನು''. ಪತ್ನಿಯ ದುಃಖ ಹೇಳ ತೀರದಾಯಿತು. ಆದರೂ ಆಗೆಂಥ ದುಃಖ !

*ಪತಿಯು ಲಿಂಗಾಗಿದ್ದ ಸತಿ ಶರಣನಾಗಿದ್ದ*
*ರತುನ ಕಾಯಕವೆ ಶಿವಪೂಜೆ । ಇಂದ್ಹೋತು*
*ಜನನೇಕೆ ಇನ್ನು ಬಾಳುದಕೆ ॥*

ಎನ್ನುತ್ತಾಳೆ ಸಾತವ್ವ. ರತ್ನಪ್ರಾಯವಾದ ಕಾಯಕ ಹೋಯಿತಲ್ಲಾ ಎಂದು ದುಃಖಿಸುತ್ತಾಳೆ ! ಈ ಪ್ರಸಂಗ ಅಜಗಣ್ಣ ಸತ್ತಾಗ ಮುಕ್ತಾಯಕ್ಕ ಅತ್ತ ಪ್ರಸಂಗದ ನೆನಪಾಗುವಂತಿದೆ. ಅಲ್ಲಿ ಗುರುವಿಗಾಗಿ, ಇಲ್ಲಿ ಕಾಯಕಕ್ಕಾಗಿ :

ಜನಪದ ಬೇಡಿದ್ದಾದರೂ ಏನನ್ನು? ಕೈಲಾಸವನ್ನೇ? ಶಿವನನ್ನೆ?

*ಬೇಡೆನಗೆ ಕೈಲಾಸ ನೀಡೆನಗೆ ಶಿವಭಕ್ತಿ*
*ಮಾಡುವೆನು ಸೇವೆ ಶಿವಮತಕೆ । ಶರಣರಿಗೆ*
*ನಾಡ ಕಾಯಕವೆ ಕೈಲಾಸ ॥*

ಅವರಿಗೆ ಕಾಯಕವೆ ಕೈಲಾಸವಾಯಿತು. ಸೇವೆ ಮಾಡುವುದೆ ಗುರಿಯಾಯಿತು, ಶಿವಭಕ್ತಿಯೆನಿಸಿತು. ಶರಣರ ದೃಷ್ಟಿಪುರುಷದಿಂದ ಜನಪದ ಉದಾತ್ತ ಮೌಲ್ಯಗಳನ್ನು ತನ್ನದಾಗಿಸಿಕೊಳ್ಳುವಂತಾಯಿತು. ''ಲಿಂಗಾಗ ಸಾಮರಸ್ಯ ವೆನ್ನುವುದು ಗೃಹಸ್ಥ ಜೀವನಕ್ಕೆ ವಿರುದವಾದುದಾಗಲೀ ವಿಮುಖವಾದುದಾಗಲೀ ಅಲ್ಲ; ಈ ಜೀವನವನ್ನೇ ಆ ಜೀವನವನ್ನಾಗಿ ಪರಿವರ್ತಿಸುವ ಯೋಗ. ಅದಕ್ಕೆ 'ದಾಸೋಹಂ' ಎನ್ನುವ ಸಮರ್ಪಣ ಭಾವವೇ ಮೂಲ''[೫]. ಕೇತಯ್ಯ-ಸಾತವ್ವರ ಜೀವನದಲ್ಲಿ ಜಾನಪದ ಅದನ್ನು ಕಂಡಿದೆ.

''ಸತಿ ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ'' ಎಂಬ ಶರಣವಾಣಿಯನ್ನು ತನ್ನದಾಗಿಸಿಕೊಂಡ ಶ್ರದ್ಧೆಯನ್ನಿಲ್ಲಿ ಕಾಣಬಹುದು :

*ಸತಿ ಪತಿ ಇದ್ದರೆ ಹಿತವಂತರಿರಬೇಕು*
*ಕುಂಬಾರದ್ದುಳದ್ದಾಂಗೆ ಸಂಸಾರ । ಸಾಗಿದರೆ*
*ಮುಂದ್ಹತೆ ತಂಗಿ ಕೈಲಾಸ*

''ಇದ್ದು ಬದ್ಧನಾಗದೆ ಸುಳಿದು ಸೂತಕಿಯಾಗದೆ'' ಇಹ-ಪರಗಳನ್ನು ಸಮನ್ವಯಿಸುವ ಸುವರ್ಣ ಮಾಧ್ಯಮವಾದ ಶರಣರ ಜೀವನ ಸಾಹಿತ್ಯ ಜನಪದಕ್ಕೆ ಆದರ್ಶವಾದುದರಲ್ಲಿ ಆಶ್ಚರ್ಯವೇನೂ ಇಲ್ಲ. ''ಕುಂಬಾರದುಳದ್ದಾಂಗೆ ಸಂಸಾರ'' ಸಾಗಿಸುವ ಅಪೇಕ್ಷೆ ಅದಕ್ಕಿದೆ.

*(ಮುಂದುವರೆಯುತ್ತದೆ)*







# ಮೌಲ್ಯಗಳು

- ಶ್ರೀ ಮ.ನಿ.ಪ್ರ.ಸ್ವ. ಶಾಂತಮಲ್ಲಿಕಾರ್ಜುನ ಸ್ವಾಮಿಗಳು *

**ಭಾ**ರತ ಗಣತಂತ್ರ ದೇಶವಾಗಿ ೬೯ ಸಂವತ್ಸರಗಳು ಕಳೆದು ೭೦ನೇ ವರ್ಷಕ್ಕೆ ಕಾಲಿರಿಸಿದೆ. ಸ್ವಾತಂತ್ರ್ಯ ತರುವಾಯ ದೇಶ ಎದುರಿಸಿದ ಸಮಸ್ಯೆಗಳು ಅಪರಿಮಿತ. ಈ ಸಮಸ್ಯೆಗಳ ನಡುವೆಯೂ ಅಗಾಧ ಪ್ರಗತಿ ಸಾಧಿಸಿರುವುದನ್ನು ಯಾರೂ ಅಲ್ಲಗಳೆ ಯುವಂತಿಲ್ಲ. ಬೃಹತ್ ಪ್ರಜಾತಂತ್ರ ರಾಷ್ಟ್ರದಲ್ಲಿ ಎಲ್ಲಾ ಧರ್ಮ, ವರ್ಗ, ವರ್ಣಗಳಿಗೆ ಯಾವುದೇ ತಾರತಮ್ಯ ವಿಲ್ಲದ ದೇಶ ನಿರ್ಮಾಣ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಳ್ಳಲು, ಈ ದೇಶ ಸಂವಿಧಾನಾತ್ಮಕವಾಗಿ ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ಎಂಬ ಸೂತ್ರದಡಿ ಪ್ರಜೆಗಳು, ಪ್ರಜೆಗಳಿಗಾಗಿ, ಪ್ರಜೆಗಳಿಗೋಸ್ಕರವೆಂಬ ಘೋಷಣೆಯೊಂದಿಗೆ ಪ್ರಜೆಗಳೇ ಪ್ರಭುಗಳೆಂಬ ಧ್ಯೇಯವಾಕ್ಯ ಸ್ವೀಕರಿಸಿ ೭೦ ವರ್ಷಗಳು ಉರುಳಿದವು. ಇಂದು ಈ ದೇಶ ಜಾಗತಿಕ ಮಟ್ಟದಲ್ಲಿ ಪ್ರಬಲ ಗಣತಂತ್ರ ರಾಷ್ಟ್ರವಾಗಿ ಹೊರಹೊಮ್ಮಿದೆ. ಆದರೆ ಸಂವಿಧಾನಾತ್ಮಕವಾದ ವಿಚಾರಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ವೈಫಲ್ಯ ಎದುರಿಸಿರುವುದನ್ನು ನಾವು ಒಪ್ಪಿಕೊಳ್ಳಲೇಬೇಕು. ೭೦ ವರ್ಷಗಳ ತರುವಾಯವೂ ಸಮಸ್ಯೆಗಳು ನಮ್ಮನ್ನು ಕಿತ್ತು ತಿನ್ನುತ್ತಿರುವುದನ್ನು ನೋಡಿದಾಗ, ಯಾವುದು ಸರ್ವರನ್ನೂ ಒಗ್ಗೂಡಿಸುವ ಶಕ್ತಿ ಎಂದು ನಮ್ಮ ಭಾವನೆಯಿದೆಯೋ ಅದೇ ಇಂದು ಸಮಾಜವನ್ನು ವಿಘಟನೆ ಮಾಡುತ್ತಿರುವುದನ್ನು ಅವಲೋಕಿಸಿದಾಗ ಎಲ್ಲಿ ನಾವು ಎಡವಿದ್ದೇವೆ ಎಂದು ಆತ್ಮನಿರೀಕ್ಷೆ ಮಾಡಿಕೊಳ್ಳಲು ಇದು ಸಕಾಲ. ಧರ್ಮದ ಹೆಸರಿನಲ್ಲಿ ಭಯೋತ್ಪಾದನೆ ಇಂದು ಇಡೀ ಜಗತ್ತು ಎದುರಿಸುತ್ತಿರುವ ಸಮಸ್ಯೆ. ಆದರೆ ಒಂದಲ್ಲ ಒಂದು ರೀತಿ ಶತಶತಮಾನಗಳಿಂದಲೂ ಭರತಖಂಡ ಈ ರೀತಿಯ ದಾಳಿಯನ್ನು ಎದುರಿಸಿಕೊಂಡು ಬಂದಿರುವು ದನ್ನು ನಾವು ಗಮನಿಸಬಹುದು. ಆದರೆ ಹಿಂದೆಲ್ಲಾ ಅನಕ್ಷರತೆ, ಅಜ್ಞಾನ, ಅಂಧಾನುಕರಣೆಗಳಿಂದ ಇದಕ್ಕೆ ದಾಸರಾಗಿದ್ದರೆ, ಇಂದು ವಿದ್ಯಾವಂತ, ಪ್ರಾಜ್ಞಸಮೂಹ ಇದನ್ನು ಬೆಂಬಲಿಸುತ್ತಿರುವುದನ್ನು ನೋಡಿದಾಗ ಗಣತಂತ್ರ ವ್ಯವಸ್ಥೆ ನಮ್ಮೆಲ್ಲರನ್ನು ಒಗ್ಗೂಡಿಸುವಲ್ಲಿ ಹಿನ್ನಡೆ ಸಾಧಿಸಿದ್ದನ್ನು ಗಮನಿಸಬಹುದಾಗಿದೆ. ನಮಗೆ ನೀಡಿದ ಮುಕ್ತ ಸ್ವಾತಂತ್ರ್ಯವನ್ನು ಬಳಸಿಕೊಂಡು ಸಮಗ್ರ ದೇಶವನ್ನು ನಿರ್ಮಾಣ ಮಾಡಬೇಕಾಗಿದ್ದ ನಾವು ಸ್ವಾತಂತ್ರ್ಯವನ್ನು ಸ್ವೇಚ್ಛೆಯಾಗಿ ಬಳಸಿಕೊಂಡು ಇಡೀ ವ್ಯವಸ್ಥೆಯನ್ನು ಬುಡಮೇಲು ಮಾಡಿರುವುದನ್ನು ಕಾಣಬಹುದಾಗಿದೆ.

ಯುವ ಜನರು ಹಿಂದೆಂದಿಗಿಂತಲೂ ಇಂದು ಬುದ್ಧಿವಂತರಾಗಿದ್ದಾರೆ. ಅವರ ಬುದ್ಧಿವಂತಿಕೆ ರಚನಾತ್ಮಕ ಕೆಲಸದಲ್ಲಿ ತೊಡಗಿಸಿಕೊಳ್ಳಲು ಪ್ರೇರೇಪಣೆ ನೀಡಬೇಕು. ಮೌಲ್ಯಗಳ ಮೇಲೆ ಆಘಾತವಾಗುತ್ತಿರುವುದು ಇಡೀ ವ್ಯವಸ್ಥೆಯ ನಾಶಕ್ಕೆ ಮೂಲ ಕಾರಣ. ಇತ್ತೀಚಿನ ದಿನಗಳಲ್ಲಿ ಸಂಸತ್ ಭವನ, ಮುಂಬೈ ಹತ್ಯಾಕಾಂಡ, ಮಾಲೆಂಗಾವ್‌ನಲ್ಲಿ ಸಂಭವಿಸಿದ ಘಟನೆಗಳೆಲ್ಲ ನಮ್ಮಲ್ಲಿನ ಮೌಲ್ಯನಾಶದ ಸೂಚನೆಗಳು. ತಾಜ್, ಟ್ರೆಡೆಂಟ್, ಸಂಸತ್ ಭವನಗಳ ಮೇಲೆ ದಾಳಿ ನಡೆದ ಕೇವಲ ತಿಂಗಳಿನಲ್ಲಿ ಅವೆಲ್ಲವು ಮೊದಲಿನಂತಾದುದನ್ನು ನಾವು ಬಲ್ಲೆವು. ಅಂದರೆ ಇವೆಲ್ಲವೂ ಸರಿಪಡಿಸಲು ಸಾಧ್ಯವಿರು ವಂತಹುದು. ಆದರೆ ಮೌಲ್ಯಗಳ ಮೇಲಾಗುವ ಆಘಾತವನ್ನು ಸರಿಪಡಿಸಲು ಸಾಧ್ಯವಿಲ್ಲ. ಇದರ ಪ್ರತಿಫಲನ್ನು ಸಮಾಜ ಅನುಭವಿಸುತ್ತದೆ. ಆದ್ದರಿಂದ ಪ್ರಜಾತಂತ್ರ ವ್ಯವಸ್ಥೆಗೆ ತೆರೆದುಕೊಂಡ ಹೃದಯ ಮೌಲ್ಯಗಳ ಕಡೆಯೂ ಗಮನ ಹರಿಸಲು ಇದು ಸಕಾಲ.

**ಹಿಂದೆ ನಾಡು ನುಡಿಗಾಗಿ ಹೋರಾಡಿ**
**ಸ್ವಾತಂತ್ರ್ಯ ಮಾಲ್ಯವ ಮಿಡಿಸಿದರು**
**ಅದನನುಭವಿಸಿದ ಪೀಳಿಗೆ**
**ಸ್ವಚ್ಛಂದದಿ ಮಾಡದಿರಲಿ ಮೌಲ್ಯದ ಬಂಜರು**

* ಅಧ್ಯಕ್ಷರು, ಶ್ರೀ ಅರಮೇರಿ ಕಳಂಚೇರಿ ಮಠ, ವೀರರಾಜೇಂದ್ರಪೇಟೆ ತಾ॥, ಕೊಡಗು ಜಿಲ್ಲೆ-೫೭೧ ೨೧೮



# ಶಿಕ್ಷಣ – ಒಂದು ಚಿಂತನೆ

– ಕೆ.ಬಿ. ಶಿವಶಂಕರಯ್ಯ *

ಶಿಕ್ಷಣ ಎಂದರೆ ವಿದ್ಯಾಭ್ಯಾಸ ಪದ್ಧತಿ, ವಿದ್ಯಾಭ್ಯಾಸ ಕ್ರಮ. ಮಾನವನ ಬೌದ್ಧಿಕ ಹಾಗೂ ಮಾನಸಿಕ ವಿಕಾಸಕ್ಕೆ ಶಿಕ್ಷಣ ಬಹುಮುಖ್ಯವಾದುದು. ಶಾಂತಿ-ಅಶಾಂತಿ, ಸುಖ-ದುಃಖ, ನೋವು-ನಲಿವು, ನೈತಿಕತೆ-ಅನೈತಿಕತೆ ಇವುಗಳಿಗೆ ಮೂಲ ಮನಸ್ಸು. ಮನಸ್ಸನ್ನು ಸುಧಾರಿಸುವುದೇ ಶಿಕ್ಷಣ ಎಂದಿದ್ದಾರೆ ಶಿಕ್ಷಣ ತಜ್ಞರು. ಯಾವುದೇ ರಾಷ್ಟ್ರದ ಪ್ರಗತಿ, ಆ ರಾಷ್ಟ್ರದ ಸಾಕ್ಷರತೆಯ ಮೇಲೆ ಅವಲಂಬಿತವಾಗಿರುತ್ತದೆ. "ಸಾಕ್ಷರತೆ ವ್ಯಕ್ತಿಯ ವಿಕಾಸಕ್ಕೆ ಸಹಕಾರಿ" ಎಂದಿದ್ದಾರೆ ಗಾಂಧೀಜಿ.

*'ವಿದ್ಯಾ ದದಾತಿ ವಿನಯಂ ವಿನಯದದಾತಿ ಪಾತ್ರತಾಂ*
*ಪಾತ್ರತ್ವಾಭನ ಮಾಪ್ನೋತಿ ಧನಾದ್ಧರ್ಮಃ ತತಃ ಸುಖಂ'*

ಎಂದು ಹಿತೋಪದೇಶ ಹೇಳುತ್ತದೆ. ವಿದ್ಯೆಯಿಂದ ಸಂಸ್ಕೃತಿ ಬೆಳೆಯುತ್ತದೆ. ವಿದ್ಯೆಗೆ ವಿನಯವೇ ಭೂಷಣ, ಅಹಂಕಾರ ನಾಶ, ಸಂಪತ್ತು, ಸಂಪತ್ತಿನಿಂದ ಧರ್ಮ, ಆದರಿಂದ ಸುಖ ಲಭ್ಯ. ಅಹಂಕಾರವಿದ್ದ ಕಡೆ ವಿನಯಕ್ಕೆ ಸ್ಥಾನವಿಲ್ಲ. ಎಲ್ಲಿ ವಿನಯವಿಲ್ಲವೋ ಅಲ್ಲಿ ಸಂಸ್ಕೃತಿಯಿಲ್ಲ. ಅಹಂಕಾರ ಹಾನಿಕಾರಕವಾದುದು. ಈ ಮಾತುಗಳಿಗೆ ಬೆರಳಕೆ ಕೊರಳ ನಾಟಕದ ಅರ್ಜುನನೇ ಸಾಕ್ಷಿ.

*ಬಿಂಕಕ್ಕೆಡೋಳೀವುದದು ವಿದ್ಯೆಯೆ ? ಅ ವಿದ್ಯೆ*
*ಕವಿಪುದಾವುದೋ ಅಹಂಕಾರಮಂ ಅದು ವಿದ್ಯೆ;*
*ಮಿಕ್ಕುದೆಲ್ಲಂ ಅವಿದ್ಯೆ.*

ದ್ರೋಣನ ಈ ಮಾತು ಸಾರ್ವಕಾಲಿಕ ಸತ್ಯ. ಈ ಮಾತು ಭಾರತಕ್ಕಷ್ಟೇ ಸೀಮಿತವಲ್ಲ. ಎಲ್ಲ ದೇಶಗಳಿಗೂ ಎಲ್ಲ ಜನಾಂಗಗಳಿಗೂ ಅನ್ವಯವಾಗುತ್ತದೆ. ನಮಗೆ ಬೇಕಾಗಿರುವುದು ಇಂಥ ವಿದ್ಯೆ.

*ಕೆಲವಂ ಬಲ್ಲವರಿಂದ ಕಲ್ತು*
*ಕೆಲವಂ ಶಾಸ್ತ್ರಂಗಳಿಂ ಕೇಳ್ದು ತಾಂ*
*ಕೆಲವಂ ಮಾಳ್ಪವರಿಂದ ಕಂಡು*
*ಕೆಲವಂ ಸುಜ್ಞಾನದಿಂದ ನೋಡುತಂ*
*ಕೆಲವಂ ಸಜ್ಜನಸಂಗದಿಂದಲರಿಯಲ್*
*ಸರ್ವಜ್ಞನಪ್ಪಂತೆ ಕೇಳ್.*

ಸೋಮೇಶ್ವರ ಕವಿ ಈ ಶ್ಲೋಕದಲ್ಲಿ ಬರುವ ಕೆಲವನ್ನು ಬಲ್ಲವರಿಂದ ಕಲಿತು ಅಂದರೆ, ಕೆಲವು ವಿಚಾರಗಳನ್ನು ಬಹುಶಃ ಜನಪದ ಸಾಹಿತ್ಯ ಗಾದೆ, ಒಗಟು, ಇತ್ಯಾದಿಗಳ ಮೂಲಕವೂ ಕಲಿತು ಎಂದು ಊಹಿಸಬಹುದಾಗಿದೆ. ಬಹುಶಃ ಸೋಮೇಶ್ವರ ಕವಿಯು ಜನಪದರನ್ನೇ ದೃಷ್ಟಿಯಲ್ಲಿಕೊಂಡು ಈ ಮಾತನ್ನು ಬಳಸಿರಬಹುದೆನಿಸುತ್ತದೆ. ವಿದ್ಯೆಯ ಬಗ್ಗೆ ಅರ್ಥಾತ್ ಜ್ಞಾನದ ಮಹತ್ವವನ್ನು ಕುರಿತು ಸರ್ವಜ್ಞನು –

*ಜ್ಞಾನದಿಂ ಮೇಲಿಲ್ಲ / ಶ್ವಾನದಿಂ ಕೀಳಿಲ್ಲ*
*ಭಾನುವಿಂದಧಿಕ ಬೆಳಗಿಲ್ಲ – ಜಗದೊಳಗೆ*
*ಜ್ಞಾನವೇ ಮಿಗಿಲು ಸರ್ವಜ್ಞ*

*ಜ್ಞಾನದಿಂದಲೇ ಇಹವು, ಜ್ಞಾನದಿಂದಲಿ ಪರವು*
*ಜ್ಞಾನವಿಲ್ಲದಿರೆ ಸಕಲವೂ ತನಗಿದ್ದು*
*ಹಾನಿಕಾಣಯ್ಯ ಸರ್ವಜ್ಞ.*

ಎಂದಿದ್ದಾರೆ. ಈ ಹಿನ್ನೆಲೆಯಿಂದ ಶಿಕ್ಷಣವನ್ನು ಕುರಿತು ವಿಚಾರ ಮಾಡಬೇಕಿದೆ.

ಶಿಕ್ಷಣದ ಅಗತ್ಯ ಮತ್ತು ಮಹತ್ವವನ್ನು ಕುರಿತು ಶಿಕ್ಷಣ ತಜ್ಞರು ತಮ್ಮದೇ ಆದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. "ಸತ್ಯ, ಸೌಂದರ್ಯ ಸಭ್ಯತೆಗಳ ಪ್ರಭೆಯೇ ಶಿಕ್ಷಣ" ಎಂದು ಗಾಂಧೀಜಿಯವರು ಹೇಳಿದರೆ, ಡಾ. ಎಸ್. ರಾಧಾಕೃಷ್ಣನ್ "ಮಕ್ಕಳು ಮಾನವರಾಗಿ, ನಾಗರಿಕರಾಗಿ ಇತರರೊಂದಿಗೆ ಗೌರವ, ಘನತೆಯಿಂದ ವರ್ತಿಸುವಂತೆ ಮಾಡುವುದೇ ಶಿಕ್ಷಣ" ಎಂದಿದ್ದಾರೆ. "ಮಾನವನನ್ನು ಸ್ವಾವಲಂಬಿಯನ್ನಾಗಿಯೂ, ನಿಸ್ವಾರ್ಥಿಯನ್ನಾಗಿಯೂ ಮಾಡುವುದೇ ಶಿಕ್ಷಣ" ಎಂದು ಸ್ವಾಮಿ ವಿವೇಕಾನಂದರು ಅಭಿಪ್ರಾಯಪಟ್ಟಿದ್ದಾರೆ.

* ಸಹ ಶಿಕ್ಷಕರು, ಶ್ರೀ ಸನಿವಾಸ ಸಿದ್ಧಗಂಗಾ ಪ್ರೌಢಶಾಲೆ, ಸಿದ್ಧಗಂಗಾ ಮಠ





ಎಲ್ಲಿ ಅನಕ್ಷರತೆ ಇರುವುದೆಯೋ ಅಲ್ಲಿ ಅಜ್ಞಾನ, ದಾರಿದ್ರ್ಯ ತಾಂಡವವಾಡುತ್ತಿರುತ್ತದೆ. ರಾಷ್ಟ್ರದ ಪ್ರಗತಿಗೆ ಎಷ್ಟೇ ಯೋಜನೆಗಳನ್ನು ರೂಪಿಸಿದರು ಪ್ರಗತಿ ಗಗನ ಕುಸುಮವಾಗಿದೆ. ವಿಜ್ಞಾನ ಯುಗದಲ್ಲಿ ನಿರಕ್ಷರತೆ ಶಾಪವಿದ್ದಂತೆ. ನಾಡಿನ, ರಾಷ್ಟ್ರದ ಬಹುತೇಕ ಸಮಸ್ಯೆಗಳಿಗೆ ಮೂಲಕಾರಣ ಅನಕ್ಷರತೆ. ಈ ಎಲ್ಲಾ ಸಮಸ್ಯೆಗಳಿಗೆ ಏಕೈಕ ಪರಿಹಾರವೆಂದರೆ ಅನಕ್ಷರತೆಯ ನಿರ್ಮೂಲನೆ. ಯಾವುದೇ ರಾಷ್ಟ್ರದ ಪ್ರಗತಿ ಆ ರಾಷ್ಟ್ರದ ಸಾಕ್ಷರತೆಯ ಮೇಲೆ ಅವಲಂಬಿತವಾಗಿರುತ್ತದೆ.

ನೂರಾರು ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ, ಅತಿ ಶೀಘ್ರದಲ್ಲಿ ಅಣೆಕಟ್ಟುಗಳನ್ನು ನಿರ್ಮಿಸಬಹುದು, ಕೈಗಾರಿಕೆಗಳನ್ನು ಸ್ಥಾಪಿಸಬಹುದು. ದೊಡ್ಡ ದೊಡ್ಡ ಸೌಧಗಳನ್ನು ಕಟ್ಟಬಹುದು. ಆದರೆ ಈ ಮಹಾಕಾರ್ಯಗಳನ್ನು ಸಾಧಿಸುವ ವ್ಯಕ್ತಿಯ ಮನಸ್ಸನ್ನು ಪರಿವರ್ತನೆಗೊಳಿಸುವುದು ಅಷ್ಟೊಂದು ಸುಲಭವಲ್ಲ. ಕೆಲವು ವರ್ಷಗಳು ಬೃಹತ್ ಪ್ರಮಾಣದ ಲೋಕೋಪಯೋಗಿ ಕಟ್ಟಡಗಳ ನಿರ್ಮಾಣ ನಿಂತರು ಚಿಂತೆಯಿಲ್ಲ; ಅದಕ್ಕೆ ಬದಲಾಗಿ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ದೊರಕುವಂತಾಗಬೇಕು ಎಂದು ಅರ್ಥಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಸಾಕ್ಷರತೆಗೆ ನಮ್ಮ ಜನಪದರು ಹಿಂದಿನಿಂದಲೂ ಮಹತ್ವವನ್ನು ಕೊಡುತ್ತಾ ಬಂದಿದ್ದಾರೆ. ಜನಪದ ಸಾಹಿತ್ಯದಲ್ಲಿ ಸಾಕ್ಷರತೆಗೆ ಸಂಬಂಧಿಸಿದಂತೆ ಅನೇಕ ತ್ರಿಪದಿಗಳು ಸಿಗುತ್ತವೆ. ಈಗಿನಂತೆ ಹಿಂದೆ ಶಿಕ್ಷಣದ ಸೌಲಭ್ಯಗಳಿರದಿದ್ದರೂ ಗ್ರಾಮೀಣರು ಶಿಕ್ಷಣದ ಮಹತ್ವವನ್ನು ಅರ್ಥಮಾಡಿಕೊಂಡಿದ್ದರು. ಆಗಿನ ಶಿಕ್ಷಣ ಪದ್ಧತಿಯನ್ನು ಒಂದು ತ್ರಿಪದಿಯಲ್ಲಿ ನಮ್ಮ ಗ್ರಾಮೀಣರು ಹೀಗೆ ವರ್ಣಿಸಿದ್ದಾರೆ.

*ಓದೋ ಸಾಲಿಗೆ ಹೋಗಿ ಒಳ್ಳೆ ಬುದ್ಧಿಯ ಕಲಿಯೋ*
*ಮಗ್ಗಿಯ ಬರಿಯೋ ಮಳಲಾಗ – ನನಕಂದ*
*ತಗ್ಗಿಸಿ ಹಿಡಿಯೋ ಹಲಗೇಯ !*

ಶಾಲೆಗೆ ಹೋಗುವ ಮಕ್ಕಳನ್ನು ಕಂಡರೆ ಯಾವ ತಂದೆ ತಾಯಿಗಳಿಗೆ ಸಂತೋಷವಾಗುವುದಿಲ್ಲ! ಅವರ ಬಗ್ಗೆ ಅಪಾರ ಅಭಿಮಾನ, ಪ್ರೀತಿ ವಾತ್ಸಲ್ಯದ ಮಹಾಪೂರ! ಆ ತಾಯಿ ತನ್ನ ಮಗನಿಗೆ ಹೇಳುವುದು ಒಳ್ಳೆ ಬುದ್ಧಿಯ ಕಲಿ ಎಂದು. ಅಂದ್ರರೆ ನೈತಿಕ ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಡುತ್ತಿದ್ದರು ಎಂಬುದು ಆಕೆಯ ಮಾತಿನಿಂದ ವ್ಯಕ್ತವಾಗುತ್ತದೆ.

ಓದು ಬರಹ ಬಾರದವರಿಗೆ ಸಮಾಜದಲ್ಲಿ ಸರಕಾರದಲ್ಲಿ ಬೆಲೆಯಿಲ್ಲ, ಮನ್ನಣೆಯಿಲ್ಲ ಎಂಬುದನ್ನು ಅರಿತ ಜನಪದರು ಅಕ್ಷರ ಕಲಿಯುವಂತೆ ಮಕ್ಕಳನ್ನು ಪ್ರೇರೇಪಿಸಿದ್ದಾರೆ.

*ಸರಕಾರ ಎಂಬುದೊಂದು ದರಕಾರ ನಮಗಿಲ್ಲ*
*ಬರಕೊಳ್ಳ ಕಂದ ಮನಿಯಾಗ – ಇದ್ದಾರ*
*ಸರಕಾರದಾಗ ಸಮಪಾಲು !*

ಒಂದೊಂದು ನುಡಿಯೂ ಅರ್ಥಪೂರ್ಣ.

ಭಾರತದಲ್ಲಿ ಶಿಕ್ಷಣ ಪ್ರಚಾರ ನಿನ್ನೆ ಮೊನ್ನೆಯದಲ್ಲ. ಐದು ಸಾವಿರ ವರ್ಷಗಳ ಹಿಂದೆಯೇ ಸಿಂಧೂ ಕಣಿವೆಯಲ್ಲಿ ಮಣ್ಣಿನ ಹಲಗೆಗಳ ಮೇಲೆ ಬರೆದಿಡುವ ಪದ್ಧತಿ ಇತ್ತು. ಆದರೆ ಅದನ್ನು ವ್ಯವಸ್ಥಿತವಾಗಿ ತಂದವನೆಂದರೆ ಅಶೋಕ ಚಕ್ರವರ್ತಿ ! ತನ್ನ ಪ್ರಜೆಗಳು ನೀತಿವಂತರು, ಸತ್ಯವಂತರೂ, ಧರ್ಮನಿಷ್ಠರು ಆಗಬೇಕೆಂಬುದು ಅವನ ಬಯಕೆಯಾಗಿತ್ತು. ಅದಕ್ಕಾಗಿ ಅವನು ಹಲವಾರು ಜನಪ್ರಿಯ ಸಾಧನಗಳನ್ನು ಬಳಸಿಕೊಂಡ. ಬಂಡೆಗಳ ಮೇಲೆ, ಕಲ್ಲು ಕಂಬಗಳ ಮೇಲೆ ಉಪದೇಶಗಳನ್ನು ಕೊರೆಸಿದ. ತಗಡುಗಳ ಮೇಲೆ ಬರೆಸಿದ. ಈ ಕಾರ್ಯಕ್ರಮದ ಮೇಲ್ವಿಚಾರಣೆಗಾಗಿ ಒಬ್ಬ ಮಂತ್ರಿಯನ್ನೇ ನೇಮಿಸಿದ.

ಇಂದಿನ ಶಿಕ್ಷಣವು ಪದವಿಯನ್ನು ಪಡೆದು ಉದ್ಯೋಗವನ್ನು ಪಡೆಯುವುದಕಷ್ಟೇ ಸೀಮಿತವಾಗಿದೆ. ಅನೀತಿ, ಭ್ರಷ್ಟಾಚಾರ, ಅಪ್ರಾಮಾಣಿಕತೆ, ಅಶಿಸ್ತು ತಾಂಡವವಾಡುತ್ತಿದೆ. ಶಿಕ್ಷಣದ ಜೊತೆಗೆ ನೈತಿಕ ಶಿಕ್ಷಣಕ್ಕೂ ಒತ್ತು ಕೊಟ್ಟಾಗ ಇಂದು ಕಾಡುತ್ತಿರುವ ಅನೇಕ ಜ್ವಲಂತ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ನೀತಿ ರಹಿತ ಶಿಕ್ಷಣ, ಅದೊಂದು ಪಾಪವೆಂದಿದ್ದಾರೆ ಗಾಂಧೀಜಿ. ಶಿಕ್ಷಣದ ಗುರಿಯೇ ನೀತಿ, ನೀತಿಯ ತಳಹದಿಯ ಮೇಲೆ ನಮ್ಮ ಬದುಕು ನಿಲ್ಲಬೇಕು.

ಆಕರ ಗ್ರಂಥಗಳು :
೧. ಎಚ್.ಎಸ್. ಸಿದ್ಧಗಂಗಪ್ಪ – ಜಾನಪದ ನೆಲೆಗಳು, ಪ್ರ. ಕಲಾ ಪ್ರಕಾಶನ, ಬೆಂಗಳೂರು
೨. ಎಚ್.ಎಸ್. ಸಿದ್ಧಗಂಗಪ್ಪ – ಚಿಂತನರಶ್ಮಿ – ಕಾವ್ಯಶ್ರೀ ಪ್ರಕಾಶನ, ಬೆಂಗಳೂರು

ಶ್ರೀ ಸಿದ್ಧಗಂಗಾ ಮಠ, ತುಮಕೂರು

**ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ 80ಜಿ ಅಡಿಯಲ್ಲಿ ಶೇ. 50ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೨೨೬. | ಶ್ರೀ ನಂದೀಶಯ್ಯ<br>ಸಿರಾಗೇಟ್, ತುಮಕೂರು | ೫,೦೦೦.೦೦ |
| ೧೨೨೭. | ಶ್ರೀ ಬಿ.ಎಸ್. ಕೃಷ್ಣ ಸನಿಲ್<br>ಥಾಣೆ, ಮಹಾರಾಷ್ಟ್ರ | ೧೦,೦೦೦.೦೦ |
| ೧೨೨೮. | ಶ್ರೀ ಕೆ.ಎನ್. ನಾರಾಯಣರೆಡ್ಡಿ<br>ಕೆ.ಜಿ.ಎಫ್. | ೨,೦೦೦.೦೦ |
| ೧೨೨೯. | ಶ್ರೀ ಸಿ.ಬಿ. ಬಸವರಾಜು<br>ಹಾವೇರಿ | ೧,೦೦೦.೦೦ |
| ೧೨೩೦. | ಶ್ರೀ ಡಿ.ಎಸ್. ದಕ್ಷಿಣಾಮೂರ್ತಿ<br>ತುಮಕೂರು | ೧,೦೦೦.೦೦ |
| ೧೨೩೧. | ಶ್ರೀ ಯಮ್ಮವೀರಪ್ಪ ಯಮ್ಮ ಕೊಟ್ರಪ್ಪ<br>ಬೆಂಗಳೂರು | ೫,೦೦೦.೦೦ |
| ೧೨೩೨. | ಶ್ರೀ ಸಿದ್ಧಮೂರ್ತಿ<br>ಬೆಂಗಳೂರು | ೧,೦೦೧.೦೦ |
| ೧೨೩೩. | ಶ್ರೀ ಹೇಮಣ್ಣ<br>ತುರುವಣ್ಣೂರು | ೧,೦೦೦.೦೦ |
| ೧೨೩೪. | ಶ್ರೀ ಎಂ. ಚನ್ನಪ್ಪ ಮತ್ತು ಕುಟುಂಬ<br>ಗೋಣಿಪುರ | ೫,೦೦೧.೦೦ |
| ೧೨೩೫. | ಶ್ರೀ ಗೀತಾ ನಟರಾಜ್<br>ಕಡೂರು | ೧೦,೦೦೧.೦೦ |
| ೧೨೩೬. | ಶ್ರೀ ಎನ್.ಹೆಚ್. ಪುಟ್ಟಲಿಂಗಯ್ಯ<br>ಬೆಂಗಳೂರು | ೧,೧೧೧.೦೦ |
| ೧೨೩೭. | ಶ್ರೀ ಮುದ್ಧಪ್ಪ<br>ಚಿಕ್ಕಕುರುಗೋಡು | ೧,೫೦೧.೦೦ |
| ೧೨೩೮. | ಶ್ರೀ ಭಾರತಿ ನಾಗರಾಜ್ ಮತ್ತು ಕುಟುಂಬ<br>ಸಕಲೇಶಪುರ | ೧೦,೦೧೦.೦೦ |
| ೧೨೩೯. | ಶ್ರೀ ಎನ್.ಎಂ. ಬೋರಲಿಂಗೇಗೌಡ<br>ದೊಡ್ಡಗಂಗವಾಡಿ | ೫,೦೦೧.೦೦ |
| ೧೨೪೦. | ಶ್ರೀ ಎನ್. ಕುಸುಮ<br>ಬಳ್ಳಾರಿ | ೧,೦೦೦.೦೦ |
| ೧೨೪೧. | ಶ್ರೀ ಬಸವರಾಜು-ಮಲ್ಲಯ್ಯ ಹಿರೇಮಠ<br>ಬೆಂಗಳೂರು | ೬,೦೦೧.೦೦ |
| ೧೨೪೨. | ಡಾ. ಜಿ. ವೀರಪ್ಪದೇವರು<br>ಎಸ್.ಐ.ಟಿ. ತುಮಕೂರು | ೪೦,೦೦೦.೦೦ |
| ೧೨೪೩. | ಚಿ. ಸಾಹಿತಿ ಎನ್. ಕುಮಾರ್<br>ಬೆಲಮಾರನಹಳ್ಳಿ | ೫,೦೦೧.೦೦ |
| ೧೨೪೪. | ಚಿ. ಸಂಸ್ಕೃತಿ ಎನ್. ಕುಮಾರ್<br>ಬೆಲಮಾರನಹಳ್ಳಿ | ೫,೦೦೧.೦೦ |
| ೧೨೪೫. | ಶ್ರೀ ಚಿನ್ನೇಶ್ ಗಂಗರಾಜನ್<br>ಮೈಸೂರು | ೧,೫೦೦.೦೦ |
| ೧೨೪೬. | ಶ್ರೀ ಲಲಿತಾ ವೀರೇಂದ್ರ ಗಂಗೇಶ್<br>ಮೈಸೂರು | ೧,೫೦೦.೦೦ |
| ೧೨೪೭. | ಶ್ರೀ ಟಿ. ಚಂದ್ರಶೇಖರಯ್ಯ<br>ತುಮಕೂರು | ೨,೦೦೦.೦೦ |
| ೧೨೪೮. | ಶ್ರೀ ಎಲ್. ಪುಟ್ಟಶಾಮಯ್ಯ<br>ಅಂಕಮ್ಮನದೊಡ್ಡಿ | ೧,೦೦೦.೦೦ |
| ೧೨೪೯. | ಶ್ರೀ ಸಿ. ಸಿದ್ಧಲಿಂಗಯ್ಯ<br>ಬೆಂಗಳೂರು | ೧,೦೦೦.೦೦ |
| ೧೨೫೦. | ಡಾ. ಬಿ.ಎನ್. ಚಂದ್ರಶೇಖರ್<br>ಬೆಂಗಳೂರು | ೨೫,೦೦೧.೦೦ |
| ೧೨೫೧. | ಶ್ರೀ ಎಂ.ಆರ್. ಶಿವಶಂಕರ<br>ಬೆಂಗಳೂರು | ೧,೦೦೧.೦೦ |
| ೧೨೫೨. | ಶ್ರೀ ವಿ. ಪರಮೇಶ್ವರಯ್ಯ<br>ಶಿವಮೊಗ್ಗ | ೩,೦೦೦.೦೦ |
| ೧೨೫೩. | ಶ್ರೀ ಎನ್. ಪುಟ್ಟರುದ್ರ<br>ಬೆಂಗಳೂರು | ೧,೦೦೦.೦೦ |
| ೧೨೫೪. | ಶ್ರೀ ವೆಂಕಟರವಣಯ್ಯ<br>ಸಿರಾ | ೧,೦೦೦.೦೦ |
| ೧೨೫೫. | ಶ್ರೀ ಸಿ.ಟಿ. ಕಲ್ಲಯ್ಯ<br>ರಾಯಚೂರು | ೫,೦೦೦.೦೦ |
| ೧೨೫೬. | ಶ್ರೀ ಎನ್.ಎಂ. ಮಲ್ಲಣ್ಣ<br>ಹಾಣಬಾಳು | ೧,೦೦೦.೦೦ |
| ೧೨೫೭. | ಶ್ರೀ ಸಂಜಯ ದುಂಡಪ್ಪ ಶಾಸ್ತ್ರಿ<br>ಸಂಕೇಶ್ವರ | ೧,೦೦೦.೦೦ |
| ೧೨೫೮. | ಶ್ರೀ ಕೆ. ನಾಗರಾಜ್<br>ಬೆಂಗಳೂರು | ೫,೦೦೦.೦೦ |
| ೧೨೫೯. | ಶ್ರೀ ಸಿದ್ಧರೇವಯ್ಯ<br>ಬೆಂಗಳೂರು | ೧,೦೦೦.೦೦ |
| ೧೨೬೦. | ಶ್ರೀ ಸಿ.ಎಸ್. ರಾಜಶೇಖರಯ್ಯ<br>ಬೆಂಗಳೂರು | ೧,೦೦೧.೦೦ |

*(ಮುಂದುವರೆಯುತ್ತದೆ)*

RNI No. 17139/69 "Siddaganga" Monthly - Postal Reg. No. L2/RNP/385/TMR/2015-17

## ಶ್ರೀಮಠದಲ್ಲಿ ಶೈಕ್ಷಣಿಕ ವರ್ಷದ ಶಾಲಾ ದಾಖಲಾತಿ ಪ್ರಕ್ರಿಯೆ - ಒಂದು ಅಪೂರ್ವ ನೋಟ











## ಶ್ರೀಮಠದಲ್ಲಿ ಪ್ರತಿನಿತ್ಯ ಸಂಜೆ ನಡೆಯುವ ಸಾಮೂಹಿಕ ಪ್ರಾರ್ಥನೆ

Cover printed at : Geetanjali Graphics, B-71, KSSIDC Indl. Area